Funding: Tattva Heritage Foundation,Kolkata. Digitization: eGangotri.

B15

ಸಂಚಿಕೆ ೧.

—: ಶ್ರೀ :—

ಕುಲಶೇಖರ ವಿರಚಿತ

# ಶ್ರೀಮುಕುಂದ ಸ್ತೋತ್ರಮಾಲ

ಮತ್ತು

## ಇತರ ಸ್ತೋತ್ರಗಳು

ಅನುವಾದಕರು:

ಪಂಡಿತ ಶ್ರೀ ಹೆಚ್. ದೇಶಿಕಾಚಾರ್ಯರವರು

ಪ್ರಕಾಶಕರು:

ಶ್ರೀ ಎಂ. ಎಸ್. ರಾಮಚಂದ್ರ ಜೋಯಿಸರು,

ಮಹಾಜನ ವಿದ್ಯಾಪೀಠ ಪ್ರಕಟನೆಗಳು

ಮೈಸೂರು.

ಬೆಲೆ ೦—೪—೦

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

## —ಶ್ರೀ ಶಂಕರಾಚಾರ್ಯ ಕೃತಷಟ್ಪದೀ—

ಅವಿನಯಮಪನಯ ವಿಷ್ಣೋ ! ದಮಯಮನಃ ಶಮಯವಿಷಯ-
ಮೃಗತೃಷ್ಣಾಂ ॥
ಭೂತದಯಾಂ ವಿಸ್ತಾರಯ ತಾರಯ ಸಂಸಾರಸಾಗರತಃ ॥ ೧ ॥
ದಿವ್ಯಧುನೀಮಕರಂದೇ ಪರಿಮಲಪಭೋಗಸಚ್ಚಿದಾನಂದೇ ।
ಶ್ರೀಪತಿಪದಾರವಿಂದೇ ಭವಭಯಖೇದಚ್ಛಿದೇ ವಂದೇ ॥೨॥
ಸತ್ಯಪಿ ಭೇದಾಪಗಮೇ ನಾಥ ! ತವಾಹಂ ನಮಾಮಕೀನಸ್ತ್ವಂ।
ಸಾಮುದ್ರೋಹಿತರಂಗಃ ಕ್ವಚನ ಸಮುದ್ರೋನತಾರಂಗಃ ॥೩॥
ಉದ್ಧೃತನಗ ! ನಗಭಿದನುಜ ! ದನುಜಕುಲಾಮಿತ್ರ ! ಮಿತ್ರಶಶಿ
ದೃಷ್ಟೇ ! ॥
ದೃಷ್ಟೇಭವತಿ ಪ್ರಭವತಿ ನಭವತಿಕಿಂ ಭವತಿರಸ್ಕಾರಃ ? ॥೪॥
ಮತ್ಸ್ಯಾದಿಭಿರವತಾರೈಃ ಅವತಾರ ವತ್ಸಾವತಾಸದಾ ವಸುಧಾಂ।
ದಾಪಮೇಶ್ವರ! ಪರಿಪಾಲ್ಯೋ ಭವತಾ ಭವತಾಪಭೀತ್ಯೋಹಂ।
ಮೋದರ ! ಗುಣ ಮಂದಿರ ! ಸುಂದರವದನಾರವಿಂದ ॥ ೫ ॥
ಗೋವಿಂದ !!
ಭವಜಲಧಿಮ ಮಥನಮಂದರ ! ಪರಮಂ ದರಮಪನೆಯತಂ
ಮೇ ॥೬॥
ನಾರಾಯಣ ! ಕರುಣಾಮಯ ! ಶರಣಂ ಕರವಾಣಿ ತಾನೌವ್ಮ
ಚರಣೌ ।
ಇತಿಷಟ್ಪದೀ ಮದೀಯೇ ವದನ ಸರೋಜೇ ಸದಾವಸುತು ॥೭॥

ಸಂಪೂರ್ಣಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಸಂಚಿಕೆ ೧.

—:ಶ್ರೀಃ:—

ಕುಲಶೇಖರ ವಿರಚಿತ

# ಶ್ರೀಮುಕುಂದ ಸ್ತೋತ್ರಮಾಲಾ

ಮತ್ತು

## ಇತರ ಸ್ತೋತ್ರಗಳು



ಅನುವಾದಕರು :

ಪಂಡಿತ ಶ್ರೀ ಹೆಚ್. ದೇಶಿಕಾಚಾರ್ಯರವರು.



ಪ್ರಕಾಶಕರು :

ಶ್ರೀ ಎಂ.ಎಸ್. ರಾಮಚಂದ್ರ ಜೋಯಿಸರು

ಮಹಾಜನ ವಿದ್ಯಾಪೀಠ ಪ್ರಕಟನೆಗಳು

ಮೈಸೂರು

ಬೆಲೆ ೦—೪—೧

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ಶ್ರೀಲಕ್ಷ್ಮೀನೃಸಿಂಹ ಪಂಚರತ್ನಂ

ತ್ವತ್ಪ್ರಭುಜೀವಪ್ರಿಯಮಿಚ್ಛಸಿಚೇತ್ ನರಹರಿಪೂಜಾಂಕುರು ಸತತಂ ।
ಪ್ರತಿಬಿಂಬಾಲಂಕೃತಿಧೃತಿಕುಶಲೋ ಬಿಂಬಾಲಂಕೃತಿಮಾತನುತೇ ॥
ಚೇತೋಭೃಂಗ ಭ್ರಮಿಸಿವೃಥಾ ಭವಮರು ಭೂಮೌ ವಿರಸಾಯಾಂ ।
ಭಜ ಭಜ ಲಕ್ಷ್ಮೀನರಸಿಂಹಾನಘಪದಸರಸಿಜ ಮಕರಂದಂ ॥೧॥

ಶುಕ್ತೌರಜತಪ್ರತಿಭಾ ಜಾತಾ ಕಟಕಾದ್ಯರ್ಥಂ ಸಮರ್ಥಾಚೇತ್ ।
ದುಃಖಮಯೀತೇಸಂಸ್ಕೃತಿರೇಷಾನಿರ್ವೃತಿದಾನೇ ನಿಪುಣಾಸ್ಯಾತ್ ॥
ಚೇತೋಭೃಂಗ ಭ್ರಮಸಿವೃಥಾಭವಮರುಭೂಮೌ ವಿರಸಾಯಾಂ ।
ಭಜ ಭಜ ಲಕ್ಷ್ಮೀನರಸಿಂಹಾನಘ ಪದಸರಸಿಜ ಮಕರಂದಂ ॥೨॥

ಆಕೃತಿಸಾಮ್ಯಾತ್ ಶಾಲ್ಮಲಿಕುಸಮೇಸ್ಥಲನಲಿನತ್ವಭ್ರಮಮಕರೋಃ ।
ಗಂಧರಸಾವಿಹಕಿಮುವಿದ್ಯೇತೇ ವಿಫಲಂಭ್ರಾಮ್ಯಸಿಭೃಶವಿರಸೇಽಸ್ಮಿನ್ ।
ಚೇತೋಭೃಂಗಭ್ರಮಸಿವೃಥಾಭವಮರು ಭೂಮೌವಿರಸಾಯಾಂ ।
ಭಜ ಭಜ ಲಕ್ಷ್ಮೀನರಸಿಂಹಾನಘಪದಸರಸಿಜಮಕರಂದಂ ॥೩॥

ಸ್ರಕ್ಚಂದನವನಿತಾದೀನ್ ವಿಷಯಾನ್ ಸುಖದಾನ್ಮತ್ವಾತತ್ರವಿಹರಸೇ ।
ಗಂಧಫಲೇಸದೃಶಾನನು ತೇಽಮೀ ಭೋಗಾನಂತರದುಃಖಕೃತಸ್ಸ್ಯುಃ ॥
ಚೇತೋಭೃಂಗ ಭ್ರಮಿಸಿ ವೃಥಾ ಭವಮರುಭೂಮೌ ವಿರಸಾಯಾಂ ।
ಭಜ ಭಜ ಲಕ್ಷ್ಮೀನರಸಿಂಹಾನಘಪದಸರಸಿಜ ಮಕರಂದಂ ॥೪॥

ತವಹಿತಮೇಕಂ ವಚನಂ ವಕ್ಷ್ಯೇ ಶೃಣುಸುಖಕಾಮೋಯದಿಸತತಂ ।
ಸ್ವಪ್ನೇದೃಷ್ಟಂಸಕಲಂಹಿ ಮೃಷಾಜಾಗ್ರತಿಚಸ್ಮರತದ್ವದಿತಿ ॥
ಚೇತೋಭೃಂಗ ಭ್ರಮಸಿ ವೃಥಾ ಭವಮರು ಭೂಮೌ.ವಿರಸಾಯಾಂ ।
ಭಜ ಭಜ ಲಕ್ಷ್ಮೀನರಸಿಂಹಾನಘಪದಸರಸಿಜ ಮಕರಂದಂ ॥೫॥

ಶ್ರೀಮಚ್ಛಂಕರಭಗವತಃ ಕೃತಿಷು

ಲಕ್ಷ್ಮೀನೃಸಿಂಹ ಪಂಚರತ್ನಂ

ಸಂಪೂರ್ಣಂ.



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀಃ

# ಪ್ರಾ ರ್ಥ ನಾ ಪ ದ್ಯ ಗ ಳು

ಯಂ ಶೈವಾಸ್ಸಮುಪಾಸತೇ ಶಿವ ಇತಿ | ಬ್ರಹ್ಮೇತಿ ವೇದಾಂತಿನಃ
ಬೌದ್ಧಾಬುದ್ಧ ಇತಿ ಪ್ರಮಾಣಪಟವಃ| ಕರ್ತೇತಿ ನೈಯ್ಯಾಯಿಕಾಃ
ಅರ್ಹನ್ನಿತ್ಯಥ ಜೈನಶಾಸನರತಾಃ | ಕರ್ಮೇತಿ ಮೀಮಾಂಸಕಾಃ |
ಸೋಽಯಂವೋ ವಿದಧಾತುವಾಂಛಿತಫಲಂ | ತ್ರೈಲೋಕ್ಯ-
ನಾಥೋಹರಿಃ ‖ ೧ ‖

ಯಂ ಬ್ರಹ್ಮಾ ವರುಣೇಂದ್ರ ರುದ್ರ ಮರುತಃ। ಸ್ತುನ್ವಂತಿ
ದಿವ್ಯೈಸ್ಸ್ತವೈಃ |
ವೇದೈಸ್ಸಾಂಗ ಪದಕ್ರಮೋಪನಿಷದೈಃ | ಗಾಯಂತಿ ಯಂ
ಸಾಮಗಾಃ ‖
ಧ್ಯಾನಾವಸ್ಥಿತ ತದ್ಗತೇನ ಮನಸಾ | ಪಶ್ಯಂತಿ ಯಂ ಯೋಗಿನಃ।
ಯಸ್ಯಾಂತಂ ನವಿದುಸ್ಸುರಾಸುರಗಣಾಃ | ದೇವಾಯ ತಸ್ಮೈ
ನಮಃ ‖ ೨ ‖

ತ್ವಮಕ್ಷರಂ ಪರಮಂ ವೇದಿತವ್ಯಂ | ತ್ವಮಸ್ಯ ವಿಶ್ವಸ್ಯ ಪರಂ
ನಿಧಾನಂ |
ತ್ವಮವ್ಯಯಶ್ಶಾಶ್ವತ ಧರ್ಮಗೋಪ್ತಾ | ಸನಾತನಸ್ತ್ವಂ
ಪುರುಷೋಮತೋಮೇ ‖ ೩ ‖

ತ್ವಮಾದಿ ದೇವಃ ಪುರುಷಃ ಪುರಾಣಃ | ತ್ವಮಸ್ಯ ವಿಶ್ವಸ್ಯಪರಂ
ನಿಧಾನಂ |
ವೇತ್ತಾಸಿ ವೇದ್ಯಂಚ ಪರಂಚ ಧಾಮ | ತ್ವಯಾತತಂ ವಿಶ್ವ
ಮನಂತರೂಪ ‖ ೪ ‖

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ | ಪಿತಾಮಹಸ್ತ್ವಂ
ಪ್ರಪಿತಾಮಹಶ್ಚ ||
ನಮೋ ನಮಸ್ತೇಽಸ್ತುಸಹಸ್ರಕೃತ್ವಃ | ಪುನಶ್ಚ ಭೂಯೋಽಪಿನಮೋ
ನಮಸ್ತೇ || ೫ ||

ಪಿತಾಸಿ ಲೋಕಸ್ಯ ಚರಾಚರಸ್ಯ | ತ್ವಮಸ್ಯಪೂಜ್ಯಶ್ಚ ಗುರು
ರ್ಗರೀಯಾನ್ |
ನತ್ವತ್ಸಮೋಽಸ್ತ್ಯಭ್ಯಧಿಕಃಕುತೋಽನ್ಯಃ | ಲೋಕತ್ರಯೇಽಪ್ಯ
ಪ್ರತಿಮಪ್ರಭಾವ || ೬ ||

ತಸ್ಮಾತ್ಪ್ರಣಮ್ಯ ಪ್ರಣಿಧಾಯಕಾಯಂ | ಪ್ರಸಾದಯೇತ್ವಾ-
ಮಹಮೀಶಮೀಡ್ಯಂ
ಪಿತೇವಪುತ್ರಸ್ಯ ಸಖೇವಸಖ್ಯುಃ | ಪ್ರಿಯಃಪ್ರಿಯಾಯಾರ್ಹಸಿ
ದೇವಸೋಢುಂ || ೭ ||

— ಮಂಗಳಂ —

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀರಸ್ತು

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ।
ಗುರುರ್ದೇವೋ ಮಹೇಶ್ವರ ॥
ಗುರುಸ್ಸಾಕ್ಷಾತ್ ಪರಂಬ್ರಹ್ಮ ।
ತಸ್ಮೈಶ್ರೀ ಗುರವೇನಮಃ ॥

## —ಶ್ರೀ ಮುಕುಂದಮಾಲಾ—

ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇದಿನೇ
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ [೧]

ಯಾವ ಮಹನೀಯನ ದಿವ್ಯನಗರದಲ್ಲಿ " ರಂಗಯಾತ್ರೆಗೆ ಹೊರಟಿದ್ದೇವೆ, ರಂಗಯಾತ್ರೆಗೆ ಹೋಗುತ್ತೇವೆ " ಎಂಬ ಉತ್ಸಾಹ ಪೂರ್ಣರಾದ ಯಾತ್ರಿಕರ ಸಡಗರದ ಕೂಗು ದಿನಗಟ್ಟಲೆ ಕೇಳಿಬರುತ್ತದೆಯೋ ಆ ರಾಜೇಂದ್ರಕುಲಶೇಖರನಿಗೆ ನಾನು ತಲೆಬಗ್ಗಿ ವಂದಿಸುತ್ತೇನೆ. [೧]

ಶ್ರೀವಲ್ಲಭೇತಿ ವರದೇತಿ ದಯಾಪರೇತಿ ।
ಭಕ್ತಪ್ರಿಯೇತಿ ಭವಲುಂಠನ ಕೋವಿದೇತಿ ।
ನಾಥೇತಿ ನಾಗಶಯನೇತಿ ಜಗನ್ನಿವಾಸೇ ।
ತ್ಯಾಲಾಪನಂ ಪ್ರತಿಪದಂ ಕುರು ಮೇ ಮುಕುಂದ [೨]

ಎಲೈ ಮುಕುಂದನೆ (ನಂಬಿದವರ ಹೃದಯದಲ್ಲಿ ಇಂಬುಗೊಂಡು ಅವರ ಸಮಸ್ತ ಇಷ್ಟಾರ್ಥಗಳನ್ನೂ ನೆರವೇರಿಸುವ ನಿಧಿಸ್ವರೂಪನೆ) ನನಗೆ ಹೆಜ್ಜೆಹೆಜ್ಜೆಗೂ, ಮಾತುಮಾತಿಗೂ ನಿನ್ನ ನಾಮಸ್ಮರಣೆಯುಂಟಾಗುವಂತೆ ಅನುಗ್ರಹಿಸು. " ಲಕ್ಷ್ಮೀಪತೇ, ವರದ, ಕರುಣಾಮಯ, ಭಕ್ತಜನ ಮಧುರ, ಸಂಸಾರಭಯನಿವಾರಣನಿಪುಣ, ನಾಥ, ಶೇಷಶಯನ, ಜಗನ್ನಿವಾಸ" ಎಂದು ಮೊದಲಾಗಿ ನಿಮಿಷ ನಿಮಿಷದಲ್ಲಿ ನಿನ್ನ ನಾಮಸಂಕೀರ್ತನವು ನನಗೆ ಒದಗುವಂತೆ ಅನುಗ್ರಹಿಸು. [೨]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಯತುಜಯತು ದೇವೋ ದೇವಕೀನಂದನೋಽಯಂ ।
ಜಯತುಜಯತು ಕೃಷ್ಣೋ ವೃಷ್ಣಿವಂಶಪ್ರದೀಪಃ ॥
ಜಯತುಜಯತು ಮೇಘಶ್ಯಾಮಲಃ ಕೋಮಲಾಂಗೋ ।
ಜಯತುಜಯತು ಪೃಥ್ವೀಭಾರನಾಶೋ ಮುಕುಂದಃ [೩]

ಜಯಿಸಲಿ, ಜಯಿಸಲಿ, ದೇವಕೀ ನಂದನನಾದ ಈ ನಮ್ಮೊಡೆಯನು ಜಯಿಸಲಿ-ಸರ್ವೋತ್ಕೃಷ್ಟನಾಗಿರಲಿ-ಜಯಿಸಲಿ, ಜಯಿಸಲಿ, ವೃಷ್ಣಿ ವಂಶಕ್ಕೆ ದಿವ್ಯ ದೀಪದಂತೆ ಪ್ರಕಾಶವೊದಗಿಸಿದ ಕೃಷ್ಣನು ಜಯಿಸಲಿ. ಜಯಿಸಲಿ, ಜಯಿಸಲಿ, (ನೀರುಂಡ) ಮೇಘದಂತೆ ಶ್ಯಾಮವರ್ಣನಾದ (ನಮ್ಮ) ಕೋಮಲಾಂಗನು ಜಯಿಸಲಿ.

ಜಯಿಸಲಿ, ಜಯಿಸಲಿ, ಭೂಭಾರವನ್ನು ಪರಿಹರಿಸುವವನಾದ (ನಮ್ಮ) ಮುಕುಂದನು ಸರ್ವೋತ್ಕೃಷ್ಟನಾಗಿ ಬಾಳಲಿ. [೩]

ಮುಕುಂದ ಮೂರ್ಧ್ನಾ ಪ್ರಣಿಪತ್ಯಯಾಚೇ
ಭವಂತಮೇಕಾಂತಮಿಯಂತಮರ್ಥಂ ॥
ಅವಿಸ್ಮೃತಿ ಸ್ತ್ವಚ್ಚರಣಾರವಿಂದೇ
ಭವೇ ಭವೇ ಮೇಸ್ತು ಭವತ್ಪ್ರಸಾದಾತ್ [೪]

ಮುಕುಂದನೆ, ನಿನಗೆ ತಲೆಬಗ್ಗಿ ನಮಸ್ಕರಿಸಿ ಇಷ್ಟೊಂದನ್ನು ಏಕಾಂತವಾಗಿ ಬೇಡುವೆನು:—ನಿನ್ನ ಅನುಗ್ರಹಬಲದಿಂದ ನನಗೆ ಜನ್ಮಜನ್ಮದಲ್ಲಿಯೂ ನಿನ್ನ ಚರಣಾರವಿಂದದ ಮರವೆಯಿಲ್ಲದಂತಾಗಲಿ. [೪]

ನಾಹಂ ವಂದೇ ತವಚರಣಯೋರ್ದ್ವಂದ್ವಮದ್ವಂದ್ವ
ಹೇತೋಃ
ಕುಂಭೀಪಾಕಂ ಗುರುಮಪಿ ಹರೇ ನಾರಕಂ ನಾಪನೇತುಂ ॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ರಮ್ಯಾ ರಾಮಾ ಮೃದುತನುಲತಾ ನಂದನೇ ನಾಪಿ ರಂತುಂ
ಭಾವೇ ಭಾವೇ ಹೃದಯ ಭವನೇ ಭಾವಯೇಯಂ
ಭವಂತಂ ॥ [೫]

ಪ್ರಭುವೇ ! ಶ್ರೀಹರಿ, ನಾನು ನಿನ್ನ ಚರಣಾರವಿಂದಯುಗಳವನ್ನು ಸುಖದುಃಖವೇ ಮೊದಲಾದ ದ್ವಂದ್ವಗಳ ಗೊಂದಲದ ಬಿಡುಗಡೆಗಾಗಿ ವಂದಿಸುವುದಿಲ್ಲ; ಕುಂಭೀಪಾಕವೆಂಬ ಗುರುತರವಾದ ನರಕದುಃಖವನ್ನು ನಿವಾರಿಸಲೆಂದು ನೆನೆಯುವುದಿಲ್ಲ. ನಂದನ ವನದಲ್ಲಿ ತರುಣೀಮಣಿಯರ ರಮ್ಯಕೋಮಲವಾದ ತನುಲತೆಗಳನ್ನು ಕೂಡಿ ವಿಹರಿಸಲು ಬಯಸಿ ನಮಿಸುವುದಿಲ್ಲ. ಆದರೆ ಭಾವಭಾವದಲ್ಲಿ (ಪ್ರತಿಯೊಂದು ಇರವಿನಲ್ಲಿ) ಜನ್ಮ ಜನ್ಮದಲ್ಲಿ ನನ್ನ ಹೃದಯಗೃಹದಲ್ಲಿ ನಿನ್ನನ್ನು ಭಾವಿಸಲು ಬಯಸುವೆನು. ॥

ನಾಸ್ಥಾ ಧರ್ಮೇ, ನವಸುನಿಚಯೇ, ನೈವಕಾಮೋಪ
ಭೋಗೇ,।
ಯದ್ಯದ್ಭವ್ಯಂ ಭವತು ಭಗವನ್ ! ಪೂರ್ವಕರ್ಮಾನು
ರೂಪಂ ।
ಏತತ್ಪ್ರಾರ್ಥ್ಯಂ ಮಮ ಬಹುಮತಂಜನ್ಮಜನ್ಮಾಂತರೇಽಪಿ
ತ್ವತ್ಪಾದಾಂಭೋರುಹ ಯುಗಗತಾ ನಿಶ್ಚಲಾ
ಭಕ್ತಿರಸ್ತು ॥ [೬]

ಭಗವನ್, ನನಗೆ ಧರ್ಮದಲ್ಲಿ ಆಸೆಯಿಲ್ಲ, ದ್ರವ್ಯಸಮೂಹದಲ್ಲಿ ಬಯಕೆಯಿಲ್ಲ, ಕಾಮೋಪಭೋಗದಲ್ಲಿಯೂ ಇಚ್ಛೆಯಿಲ್ಲ. ಪೂರ್ವ ಕರ್ಮಾನುಗುಣವಾಗಿ ಯಾವ ಯಾವುದು ಹೇಗೆಹೇಗೆ ಆಗಬೇಕೋ ಹಾಗೆ ನಡೆದುಕೊಳ್ಳಲಿ. ಆದರೆ ವಿಶೇಷಪ್ರೀತಿಯಿಂದ ನಾನು ನಿನ್ನನ್ನು ಪ್ರಾರ್ಥಿಸತಕ್ಕದು ಇದೊಂದು:—ನನಗೆ ಜನ್ಮಜನ್ಮಾಂತರದಲ್ಲಿಯೂ ನಿನ್ನ ಚರಣಾರವಿಂದವೆರಡರಲ್ಲಿ ನಿಶ್ಚಲವಾದ ಭಕ್ತಿಯುಂಟಾಗಿರಲಿ. [೬]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ದಿವಿ ವಾ ಭುವಿ ವಾ ಮಮಾಸ್ತುವಾಸೋ
ನರಕೇವಾ ನರಕಾಂತಕ, ಪ್ರಕಾಮಂ।ಅವಧೀರಿತ ಶಾರದಾರ-
ವಿಂದೌ ಚರಣೌ ತೇ ಮರಣೇಽಪಿ ಚಿಂತಯಾಮಿ ॥ [೭]

ಎಲೈ ನರಕಾಂತಕನೆ, ನನಗೆ ಸ್ವರ್ಗದಲ್ಲಿಯೋ, ಭೂಮಿಯಲ್ಲಿಯೋ ಎಲ್ಲಿ ಬೇಕಾದರೂ ಯಥೇಚ್ಛವಾಗಿ ವಾಸವಾಗಲಿ. ನರಕದಲ್ಲಿ ವಾಸವಾದರೂ ಚಿಂತೆಯಿಲ್ಲ (ಆದರೆ) ಶರತ್ಕಾಲದ ಕಮಲವನ್ನು ಧಿಕ್ಕರಿಸುವಂತೆ ಸುಂದರವಾದ ನಿನ್ನ ದಿವ್ಯಚರಣಯುಗಗಳನ್ನು ಮಾತ್ರಾ ಮರಣದಲ್ಲಿಯೂ ಚಿಂತಿಸುವ ಪುಣ್ಯವಿರಲಿ. [೭]

ಕೃಷ್ಣ ! ತ್ವದೀಯ ಪದಪಂಕಜ ಪಂಜರಾಂತ
ಮದ್ಯೈವ ಮೇ ವಿಶತು ಮಾನಸ ರಾಜಹಂಸಃ ॥
ಪ್ರಾಣಪ್ರಯಾಣ ಸಮಯೇ ಕಫವಾತಪಿತ್ತೈಃ
ಕಂಠಾವರೋಧನ ವಿಧೌ ಸ್ಮರಣಂ ಕುತಸ್ತೇ ॥ [೮]

ಹೇ ಕೃಷ್ಣ! ನನ್ನ ಮನಸ್ಸೆಂಬ ರಾಜಹಂಸವು ಈಗಲೇ ನಿನ್ನ ಪಾದಪದ್ಮವೆಂಬ ಪಂಜರದೊಳಗೆ ಸೇರಿಬಿಡಲಿ. ಪ್ರಾಣಪ್ರಯಾಣ ಸಮಯದಲ್ಲಿ (ಮರಣಕಾಲಕ್ಕೆ ಸರಿಯಾಗಿ) ನಿನ್ನನ್ನು ನೆನೆವೆನೆಂದರೆ ಕಫ ವಾತಪಿತ್ತಗಳ ಗೊಂದಲದ ತೊಂದರೆಯಿಂದ ಕೊರಲು ಬಿಗಿದುಕೊಳ್ಳುವ ಆ ಕಷ್ಟಸಮಯದಲ್ಲಿ ನಿನ್ನ ಸ್ಮರಣವು ದೊರಕುವ ಸಂಭವವುಂಟೆ ? [೮]

ಚಿಂತಯಾಮಿ ಹರಿಮೇವ ಸಂತತಂ
ಮಂದಮಂದ ಹಸಿತಾನನಾಂಬುಜಂ
ನಂದಗೋಪ ತನಯಂ ಪರಾತ್ಪರಂ
ನಾರದಾದಿ ಮುನಿಬೃಂದ ವಂದಿತಂ ॥ [೯]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಾನು ಎಂದೆಂದೂ ಶ್ರೀಹರಿಯನ್ನೇ ಚಿಂತಿಸುವೆನು. ಮಂದಹಾಸದಿಂ ಕೂಡಿದ ವದನಾರವಿಂದವುಳ್ಳ ಆ ಶ್ರೀ ಹರಿಯನ್ನೇ ನಾನು ಎಂದೆಂದೂ ಚಿಂತಿಸುವೆನು. ನಂದಗೋಪನ ಕುಮಾರನಾಗಿ ಅವತರಿಸಿದ, ನಾರದರೇ ಮುಂತಾದ ಮುನಿಗಳ ವೃಂದದಿಂದ ವಂದಿತನಾದ ಆ ಪರಾತ್ಪರ ಹರಿಯನ್ನು ಧ್ಯಾನಿಸುವೆನು. [೯]

ಕರಚರಣಸರೋಜೇ ಕಾಂತಿಮನ್ನೇತ್ರಮೀನೇ
ಶ್ರಮಮುಷಿ ಭುಜವೀಚಿವ್ಯಾಕುಲೇಗಾಧಮಾರ್ಗೇ
ಹರಿಸರಸಿ ವಿಗಾಹ್ಯಾಪೀಯ ತೇಜೋಜಲೌಘಂ
ಭವಮರುಪರಿಖಿನ್ನಃ ಖೇದಮದ್ಯತ್ಯಜಾಮಿ [೧೦]

ಅಹಹಾ ! ಸಂಸಾರವೆಂಬ ಮರಳುಕಾಡಿನಲ್ಲಿ ಅಲೆದಲೆದು ಬೆಂಡಾಗಿ ಬಳಲಿ ಬಾಯಾರಿದ ನನಗೆ ಒಂದು ಅಮೃತಸರಸ್ಸು ಸಿಕ್ಕಿದೆ. ಅದಕ್ಕೆ ಹರಿಸರಸ್ಸೆಂದು ಹೆಸರು. (ಶ್ರೀ ಹರಿಯೇ ಆ ಸನ್ನ ಕೊಳವು) ಆತನ ದಿವ್ಯ ಚರಣಗಳು ಅಲ್ಲಿಯ ಕಮಲಗಳು, ಕಾಂತಿಮಯವಾದ ಆತನ ಕಣ್ಣುಗಳೇ ಅಲ್ಲಿನ ಮೀನುಗಳು, ಆತನ ಬಾಹುಗಳೇ ಅಲ್ಲಿನ ತೆರೆಗಳು, ಸಮಸ್ತ ಶ್ರಮಗಳನ್ನು ನೀಗಿ ನಲಿಸಬಲ್ಲ ಆಳವರಿಯಲಾಗದ ಈ ಕೊಳದಲ್ಲಿ ನಾನು ಮುಳುಗಿ, (ದಿವ್ಯವಾದ) ತೇಜಸ್ಸೆಂಬ ಇಲ್ಲಿನ ನಿರ್ಮಲೋದಕದ ರಾಶಿಯನ್ನು ಕಂಠಪೂರ್ತಿಯಾಗಿ ಕುಡಿದು ನನ್ನ ಖೇದವೆಲ್ಲವನ್ನೂ ಈಗ ನೀಗಿಕೊಳ್ಳುವೆನು. [೧೦]

ಸರಸಿಜನಯನೇ ಸಶಂಖಚಕ್ರೇ ಮುರಭಿದಿ ಮಾವಿರವಸ್ವ
ಚಿತ್ತ, ರಂತುಂ
ಸುಖತರಮಪರಂ ನಜಾತು ಜಾನೇ ಹರಿಚರಣ ಸ್ಮರಣಾ-
ಮೃತೇನ ತುಲ್ಯಂ ॥ [೧೧]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

ಶ್ರೀ

ಎಲೈ ಮನಸ್ಸೇ, ಕಮಲದಳಮನೋಹಾರಿಯಾದ ಕಣ್ಣುಗಳುಳ್ಳವನೂ ಶಂಖಚಕ್ರಧಾರಿಯೂ ಆದ ಮುರಹರನೊಡನೆ ವಿಹರಿಸುವುದನ್ನು ಬಿಡಬೇಡವೋ! (ಏಕೆನ್ನುವೆಯಾ) ಆ ಶ್ರೀಹರಿಯ ಚರಣಾರವಿಂದದ ಸ್ಮರಣೆಯೆಂಬ ಅಮೃತಕ್ಕೆ ಸಮಾನವಾದ ಬೇರೊಂದು ಸುಖಕರ ವಸ್ತುವನ್ನು ಎಂದೂ ಎಲ್ಲಿಯೂ ಕಾಣೆ. [೧೧]

ಮಾಭೀರ್ಮಂದಮನೋ ವಿಚಿಂತ್ಯಬಹುಧಾ ಯಾಮೀಶ್ಚಿರಂ
ಯಾತನಾಃ
ನಾಮೀನಃಪ್ರಭವಂತಿ ಪಾಪರಿಪವಃ! ಸ್ವಾಮೀನನು
ಶ್ರೀಧರಃ ||
ಆಲಸ್ಯಂವ್ಯಪನೀಯ ಭಕ್ತಿಸುಲಭಂ ಧ್ಯಾಯಸ್ವ
ನಾರಾಯಣಂ
ಲೋಕಸ್ಯ ವ್ಯಸನಾಪನೋದನ ಕರೊ ದಾಸಸ್ಯ ಕಿಂ
ನ ಕ್ಷಮಃ || [೧೨]

ಅರರೇ ಮೂಢವಾದ ಮನಸ್ಸೇ! ಯಮಲೋಕದ ಬಗೆಬಗೆಯಾದ ನರಕ ಯಾತನೆಗಳನ್ನು ಕುರಿತು ಚಿಂತಿಸಿ ಚಿಂತಿಸಿ ಏಕೆ ತಲ್ಲಣಿಸುವೆ! ನಿನ್ನ ಭಯವನ್ನು ಬಿಡು. ಇನ್ನು ಪಾಪಗಳೆಂಬ ಶತ್ರುಗಳು ನಮ್ಮಮೇಲೆ (ತಮ್ಮ) ಅಧಿಕಾರವನ್ನು ನಡೆಸಲಾರವು. ಲಕ್ಷ್ಮೀಧರನು ನಮ್ಮ ಸ್ವಾಮಿಯಲ್ಲವೆ? ನಿನ್ನ ಜಡತೆಯನ್ನೂ, ಸೋಮಾರಿತನವನ್ನೂ, ಬಿಟ್ಟು ಭಕ್ತಿಗೆ ಸುಲಭವಾಗಿ ವಶನಾಗುವ ಶ್ರೀ ನಾರಾಯಣನನ್ನು ಧ್ಯಾನಿಸು. (ಅಯ್ಯೋ ಪೆಚ್ಚೆ!) ಲೋಕವೆಲ್ಲದರ ವ್ಯಸನವನ್ನು ಹೋಗಲಾಡಿಸುವ ಆತನು ದಾಸನಾದ ನಿನ್ನ ವ್ಯಸನವನ್ನು ನೀಗಲು ಶಕ್ತನಲ್ಲವೆ. [೧೨]

ಭವಜಲಧಿಗತಾನಾಂ ದ್ವಂಪ್ವವಾತಾಹತಾನಾಂ
ಸುತದುಹಿತೃಕಳತ್ರ ತ್ರಾಣಭಾರಾರ್ದಿತಾನಾಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಿಷಮ ವಿಷಯತೋಯೇ ಮಜ್ಜತಾಮಪ್ಲವಾನಾಂ
ಭವತು ಶರಣಮೇಕೋ ವಿಷ್ಣುಪೋತೋ ನರಾಣಾಂ ॥[೧೩]

ಸಂಸಾರಸಾಗರದಲ್ಲಿ ಸೇರಿಹೋಗಿ, ಸುಖದುಃಖಗಳೆಂಬ ದ್ವಂದ್ವಗಗಾಳಿಯ ಬಡಿತಕ್ಕೆ ಸಿಕ್ಕಿ, ಸತಿಸುತಾದಿಗಳ ಪೋಷಣೆಯ ಭಾರದಿಂದ ಕುಗ್ಗುತ್ತಾ ವಿಷಮವಾದ ಇಂದ್ರಿಯ ಸುಖಗಳ ಲಾಲಸೆಯ ನೀರಿನಲ್ಲಿ ಮುಳುಗಿ ಗತಿಗಾಣದೆ ಬಳಲುತ್ತಿರುವ ಮಾನವರಿಗೆ ವಿಷ್ಣುವೆಂಬ (ಸರ್ವಸಂಚಾರಿಯಾದ) ನಾವೆಯೊಂದೇ (ತೆಪ್ಪ) ಶರಣು. [೧೩]

ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತೋ ಮಾಸ್ಮಗಾಃ ಕಾತರತ್ವಂ
ಸರಸಿಜದೃಶಿದೇವೇ ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ ತಾರಯಿಷ್ಯತ್ಯವಶ್ಯಂ ॥ [೧೪]

ಎಲೈ ಮನಸ್ಸೇ! ಆಳವರಿಯಲಾಗದೆ ಅಗಾಧವೆನಿಸಿ ದಾಟಲಶಕ್ಯವಾದ ಸಂಸಾರಸಾಗರವನ್ನು ನಾನು ಹೇಗೆ ಉತ್ತರಿಸಿಯೇನು—ಎಂದು ಚಿಂತಿಸಿ ದೈನ್ಯದಿಂದ ಕುಗ್ಗಿಹೋಗಬೇಡ. ಕಮಲದಳದಂತೆ ಮನೋಹರವಾದ ಕಣ್ಣುಗಳುಳ್ಳವನೂ ನರಕನಿವಾರಣನೂ ಆದ ನಮ್ಮ ಪ್ರಭುವಿನಲ್ಲಿ ಅನನ್ಯವಾದ ಭಕ್ತಿಯೊಂದನ್ನಿಡು. ಅದು ನಿನ್ನನ್ನು ಅವಶ್ಯವಾಗಿ ಉದ್ಧರಿಸುವುದು. [೧೪]

ತೃಷ್ಣಾತೋಯೇ ಮದನಪವನೋದ್ಧೂತ ಮೋಹೋರ್ಮಿ ಮಾಲೇ
ದಾರಾವರ್ತೇ ತನಯ ಸಹಜ ಗ್ರಾಹಸಂಘಾಕುಲೇಚ ॥
ಸಂಸಾರಾಖ್ಯೇ ಮಹತಿಜಲಧೌ ಮಜ್ಜತಾಂನಸ್ತ್ರಿಧಾಮನ್



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪಾದಾಂಭೋಜೇ ವರದ! ಭವತೋ ಭಕ್ತಿನಾವಂ
ಪ್ರಯಚ್ಛ ॥ [೧೫]

ಹೇ ತ್ರಿಧಾಮ, ವರದಾ, ಆಸೆಯೆಂಬ ನೀರಿನಿಂದ ಕಾಮವಾಯುವಿನಿಂದ ಹುಟ್ಟಿ ಹರಡುವ ಮೋಹವೆಂಬ ತೆರೆಗಳ ಸಾಲಿನಿಂದ, ಸತಿಯೆಂಬ ಸುಳಿಯಿಂದ ಸುತ ಸಹೋದರರೆಂಬ ಮೊಸಳೆಗಳಿಂದ ಕ್ಷುಭಿತವಾಗಿ ಅಶಾಂತಿಮಯವಾದ ಸಂಸಾರವೆಂಬ ಮಹಾಸಾಗರದಲ್ಲಿ ಮುಳುಗಿ ತೊಳಲುತ್ತಿರುವ ನಮಗೆ ನಿನ್ನ ಚರಣಾರವಿಂದದ ಭಕ್ತಿಯೆಂಬ ನಾವೆಯನ್ನು ಅನುಗ್ರಹಿಸಿ ಕೊಡು. [೧೫]

ಮಾದ್ರಾಕ್ಷಂ ಕ್ಷೀಣಪುಣ್ಯಾನ್ ಕ್ಷಣಮಪಿ
ಭವತೋಭಕ್ತಿಹೀನಾನ್ ಪದಾಬ್ಜೇ
ಮಾಶ್ರೌಷಂ ಶ್ರಾವ್ಯಬದ್ಧಂ ತವಚರಿತ
ಮಪಾಸ್ಯಾನ್ಯದಾಖ್ಯಾನಜಾತಂ
ಮಾಸ್ಮಾರ್ಷಂ ಮಾಧವ ತ್ವಾಮಪಿ
ಭುವನಪತೇ ಚೇತಸಾಪಹ್ನುವಾನಾನ್
ಮಾಭೂವಂ ತ್ವತ್ಸಪರ್ಯಾವ್ಯತಿಕರ
ರಹಿತೋ ಜನ್ಮಜನ್ಮಾಂತರೇಪಿ ॥ [೧೬]

ಲೋಕನಾಥನೆ, ಕ್ಷಣಮಾತ್ರವಾದರೂ ನಿನ್ನ ಪಾದಾರವಿಂದದಲ್ಲಿ ಭಕ್ತಿಯಿಲ್ಲದ ಪುಣ್ಯಹೀನರನ್ನು ನೋಡಲಾರೆ. ನಿನ್ನ ದಿವ್ಯಚರಿತವನ್ನು ಳಿದು ಬೇರೆ ಯಾವ ಕಟ್ಟುಕಥೆಗಳನ್ನೂ ನಾನು ಕೇಳಲರಿಯೆ. ಎಲೈ ಮಾಧವನೆ, ಸಕಲ ಭುವನಪತಿಯಾದ ನಿನ್ನನ್ನು ಮನದಲ್ಲಿ ನೆನೆಯದೆ ಮರೆಯಿಸುವಂತಹ (ಮಾಯಾವಾದಿಗಳನ್ನು) ವರನ್ನು ನಾನು ಸ್ಮರಿಸದಂತಾಗಲಿ. ಅಷ್ಟೇಕೆ ? ನಿನ್ನ ಆರಾಧನದ (ಪೂಜೆಯ) ಸಂಬಂಧವಿಲ್ಲದವನಾಗಿ ಜನ್ಮಜನ್ಮಾಂತರದಲ್ಲಿಯೂ ನಾನು ಸಂಭವಿಸಲಾರೆನು. [೧೬]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಜಿಹ್ವೇ ಕೀರ್ತಯ ಕೇಶವಂ,
ಮುರರಿಪುಂ ಚೇತೋಭಜ,
ಶ್ರೀಧರಂ ಪಾಣಿದ್ವಂದ್ವ ಸಮರ್ಚಯಾ,
ಚ್ಯುತಕಥಾಃ ಶ್ರೋತ್ರದ್ವಯ, ತ್ವಂ ಶೃಣು
ಕೃಷ್ಣಂ ಲೋಕಯ ಲೋಚನದ್ವಯ,
ಹರೇರ್ಗಚ್ಛಾಂಘ್ರಿಯುಗ್ಮಾಲಯಂ,
ಜಿಘ್ರ್ರಘ್ರಾಣ, ಮುಕುಂದ ಪಾದತುಲಸೀಂ,
ಮೂರ್ಧನ್ ನಮಾಧೋಕ್ಷಜಂ ॥ [೧೭]

ಎಲೈ ನಾಲಗೆಯೇ, ಕೇಶವನ ಗುಣಗಳನ್ನು ಗಾನಮಾಡು. ಓ ಮನಸ್ಸೇ, ಮುರಹರನಾದ ಆತನನ್ನು ಭಜಿಸು. ಎನ್ನ ಎರಡು ಕೈಗಳೇ ಆ ಲಕ್ಷ್ಮೀಧರನನ್ನು ಅರ್ಚನೆಮಾಡಿರಿ, ಎಲೈ ಎನ್ನ ಕಿವಿಗಳೇ, ಆ ಅಚ್ಯುತನ ದಿವ್ಯಚರಿತ್ರವನ್ನು ಶ್ರವಣ ಮಾಡಿರಿ. ನನ್ನ ನೇತ್ರಯುಗ್ಮವೆ, ಶ್ರೀ ಕೃಷ್ಣನನ್ನು ದರ್ಶನಮಾಡಿರಿ. ಎನ್ನ ಪಾದಗಳೇ, ಶ್ರೀ ಹರಿಯ ಆಲಯಕ್ಕೆ ನಡೆಯುವವರಾಗಿ. ನಾಸಿಕವೇ, ಮುಕುಂದನ ಪಾದಕ್ಕೆ ಅರ್ಪಿಸಿದ ತುಲಸಿಯನ್ನು ಆಘ್ರಾಣಿಸು. ಎನ್ನ ಶಿರಸ್ಸೇ, ಅಧೋಕ್ಷಜನಿಗೆ ನಮಸ್ಕರಿಸಪ್ಪ. [೧೭]

ಹೇ ಲೋಕಾಃ ! ಶೃಣುತಪ್ರಸೂತಿ-
ಮರಣವ್ಯಾಧೇಶ್ಚಿಕಿತ್ಸಾಮಿಮಾಂ
ಯೋಗಜ್ಞಾಃ ಸಮುದಾಹರಂತಿ
ಮುನಯೋ ಯಾಂ ಯಾಜ್ಞವಲ್ಕ್ಯಾದಯಃ
ಅಂತರ್ಜ್ಯೋತಿರಮೇಯಮೇಕಮಮೃತಂ
ಕೃಷ್ಣಾಖ್ಯಮಾಪೀಯತಾಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತತ್ಪ್ರೀತಂ ಪರಮೌಷಧಂ ವಿತನುತೇ
ನಿರ್ವಾಣಮಾತ್ಯಂತಿಕಂ ॥ [೧೮]

ಎಲೈ ಜನಗಳಿರಾ ! ಯೋಗಜ್ಞರಾದ ಯಾಜ್ಞವಲ್ಕ್ಯರೇ ಮುಂತಾದವರು ಜನನಮರಣವೆಂಬ ವ್ಯಾಧಿಗೆ ಉದಾಹರಿಸಿರುವ ಈ ಔಷಧಿಯನ್ನು ಕೇಳಿರಿ. ಅಂತರಂಗದಲ್ಲಿ ಕಾಂತಿಮಯವಾದುದೂ, ಶಕ್ತ್ಯಾದಿಗಳು ಇಂತಹವು—ಇಷ್ಟು—ಎಂದು ಅಳೆಯಲಾಗದುದೂ ಆದ 'ಕೃಷ್ಣ'ನೆಂಬ ಸರ್ವೌಷಧವನ್ನು ಸೇವಿಸಿರಿ. ಆ ಪರಮೌಷಧವನ್ನು ಸೇವಿಸಿದೊಡನೆ ಒಂದೇ ಬಾರಿಗೆ ಸರ್ವಭವರೋಗವೂ ಸಂಪೂರ್ಣವಾಗಿ ನಾಶವಾಗಿ ಹೋಗುವುದು. [೧೮]

ಹೇಮರ್ತ್ಯಾಃ ಪರಮಂಹಿತಂ ಶೃಣುತ ವೋ
ವಕ್ಷ್ಯಾಮಿ ಸಂಕ್ಷೇಪತಃ
ಸಂಸಾರಾರ್ಣವಮಾಪದೂರ್ಮಿಬಹುಳಂ
ಸಮ್ಯಕ್ಪ್ರವಿಶ್ಯಸ್ಥಿತಾಃ
ನಾನಾಜ್ಞಾನಮಪಾಸ್ಯ ಚೇತಸಿ
ನಮೋನಾರಾಯಣಾಯೇತ್ಯಮುಂ ॥
ಮಂತ್ರಂಸಪ್ರಣವಂಪ್ರಣಾಮಸಹಿತಂ
ಪ್ರಾವರ್ತಯಧ್ವಂಮುಹುಃ ॥

ಆಪತ್ತುಗಳೆಂಬ ತೆರೆಗಳಿಂದ ತುಂಬಿದ ಸಂಸಾರಸಮುದ್ರದ ನಟ್ಟನಡುವೆ ಸಿಕ್ಕಿಬಿದ್ದು, ದಡವನರಿಯದೆ ತೊಳಲುವ ಎಲೈ ಮಾನವರಿರಾ ! ನಿಮಗೆ ಅತ್ಯಂತ ಹಿತವಾದ ಒಂದು ಸಲಹೆಯನ್ನು ಸಂಗ್ರಹವಾಗಿ ಸೂಚಿಸುತ್ತೇನೆ ಕೇಳಿರಿ:—ನಿಮ್ಮ ನೂರೆಂಟು ಬಗೆಯ ಚಿತ್ತವೃತ್ತಿಗಳನ್ನು ತೊಲಗಿಸಿ (ಬಗೆಬಗೆಯ ಚಿಂತೆಗಳನ್ನು ದೂರಮಾಡಿ) ಮನಸ್ಸಿನಲ್ಲಿ ಪ್ರಣ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಸಹಿತವಾದ 'ನಮೋ ನಾರಾಯಣಾಯ' ಎಂಬ ಮಂತ್ರವನ್ನು ಮತ್ತೆ ಮತ್ತೆ ಪ್ರಣಾಮಪೂರ್ವಕವಾಗಿ ಅನುಸಂಧಾನ ಮಾಡಿರಿ. [೧೯]

ಪೃಥ್ವೀ ರೇಣುರಣುಃಪಯಾಂಸಿ ಕಣಿಕಾಃ
ಸ್ಫಲ್ಗುಸ್ಫುಲಿಂಗೋಲಘು
ಸ್ತೇಜೋ, ನಿಃಶ್ವಸನಂ ಮರುತ್ತನುತರಂ
ರಂಧ್ರಂ ಸುಸೂಕ್ಷ್ಮಂ ನಭಃ
ಕ್ಷುದ್ರಾ ರುದ್ರಪಿತಾಮಹ ಪ್ರಭೃತಯಃ
ಕೀಟಾಸ್ಸಮಸ್ತಾಸ್ಸುರಾಃ
ದೃಷ್ಟೇ ಯತ್ರಸತಾವಕೋ ವಿಜಯತೇ
ಭೂಮಾವಧೂತಾವಧಿಃ ॥ [೨೦]

ಭಗವನ್, ನಾರಾಯಣ, ನಿನ್ನ ವಿಭೂತಿಯಲ್ಲಿ ಈ ಅಖಂಡ ಪೃಥ್ವಿಯೂ ಒಂದು ಪರಮಾಣುವಾಗಿ ಕಾಣುವುದು. ಸಮಸ್ತ ಜಲರಾಶಿಗಳೂ ಒಂದು ಬಿಂದುವಿನಂತೆ ತೋರುವುವು. ಜಗತ್ತಿನ ತೇಜೋರಾಶಿಯೆಲ್ಲವೂ ಲಘುವಾದ ಒಂದು ಕಿಡಿಯಂತೆ, ವಾಯುಮಂಡಲವೆಲ್ಲವೂ ಲಘುವಾದ ಒಂದು ನಿಶ್ವಾಸದ ಉಸಿರಿನಂತೆ, ಅಪಾರವಾದ ಗಗನವೂಕೂಡ ಬಹಳ ಸಣ್ಣದಾದ ಒಂದು ಸೂಕ್ಷ್ಮರಂಧ್ರದಂತೆ-ತೋರಿಬಿಡುವುವು. ಹಾಗೆಯೇ ನೋಡಿದರೆ ಬ್ರಹ್ಮರುದ್ರಾದಿಗಳೆಲ್ಲರೂ ಅಲ್ಲಿ ಕ್ಷುದ್ರಜೀವಿಗಳಂತೆ—ಸಮಸ್ತ ದೇವತೆಗಳೂ ಕ್ರಿಮಿಕೀಟಗಳಂತೆ ಕಂಡುಬರುವರು. ಇಂತಹ ನಿನ್ನ ದಿವ್ಯಮಹಿಮೆಯು ಎಲ್ಲೆ ಮೀರಿದುದಾಗಿ ಸರ್ವೋತ್ಕೃಷ್ಟವಾಗಿರುವುದು. [೨೦]

ಬದ್ಧೇನಾಂಜಲಿನಾ ನತೇನ ಶಿರಸಾ
ಗಾತ್ರೈಃಸರೋಮೋದ್ಗಮೈಃ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕಂಠೇನ ಸ್ವರಗದ್ಗದೇನ ನಯನೇ
ನೋದ್ಗೀರ್ಣಭಾಷ್ಪಾಂಬುನಾ
ನಿತ್ಯಂತ್ವಚ್ಚರಣಾರವಿಂದಯುಗಳ
ಧ್ಯಾನಾಮೃತಾಸ್ವಾದಿನಾಂ
ಅಸ್ಮಾಕಂ ಸರಸೀರುಹಾಕ್ಷ ಸತತಂ
ಸಂಪದ್ಯತಾಂ ಜೀವಿತಂ ॥ [೨೧]

ಎಲೈ ಪುಂಡರೀಕಾಕ್ಷನೆ, ಜೋಡಿಸಿದ ಕೈಗಳಿಂದಲೂ, ಬಗ್ಗಿಸಿದ ತಲೆಯಿಂದಲೂ, ರೋಮಾಂಚದಿಂದ ನಲಿಯುವ ಸರ್ವಾವಯವಗಳಿಂದಲೂ ಕೂಡಿ ಆನಂದಾತಿಶಯದಿಂದ ಗದ್ಗದಿತವಾದ ಕಂಠವುಳ್ಳವರಾಗಿ, ಕಣ್ಣುಗಳಲ್ಲಿ ಧಾರಾಕಾರವಾಗಿ ಆನಂದಬಾಷ್ಪಗಳು ಹರಿಯುತ್ತಿರಲು ಕಮಲದಂತೆ ಮನೋಹರವಾದ ನಿನ್ನ ದಿವ್ಯಚರಣಯುಗಳದಧ್ಯಾನವೆಂಬ ಅಮೃತವನ್ನು ಸಂತತವೂ ಸೇವಿಸುವುದರಿಂದ ನಮ್ಮ ಜೀವಿತವು ಸಂಪೆದ್ಯುಕ್ತವಾಗಿ ಕಳೆಯಲಿ. [೨೧]

ಹೇ ಗೋಪಾಲಕ ! ಹೇ ಕೃಪಾಜಲನಿಧೇ,
ಹೇ ಸಿಂಧುಕನ್ಯಾಪತೇ, ಹೇ ಕಂಸಾಂತಕ
ಹೇ ಗಜೇಂದ್ರಕರುಣಾಪಾರೀಣ, ಹೇ ಮಾಧವ
ಹೇ ರಾಮಾನುಜ ಹೇ ಜಗತ್ರಯಗುರೋ
ಹೇ ಪುಂಡರೀಕಾಕ್ಷ ಮಾಂ
ಹೇ ಗೋಪೀಜನನಾಥ ಪಾಲಯ
ಪರಂ ಜಾನಾಮಿನತ್ವಾಂವಿನಾ ॥ [೨೨]

ಎಲೈ ಗೋವಿಂದನೆ, ಲೋಕರಕ್ಷಣಕ್ಕೆ ನಿನ್ನಂತೆ ನಡುಕಟ್ಟಿನಿಂದವರಾರು ? ಎಲೈ ಕರುಣಾಸಾಗರ, ನಿನ್ನ ಕಾರುಣ್ಯಕ್ಕೆ ಅಳತೆಯೆಲ್ಲಿ !

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಲಕ್ಷ್ಮೀನಾಯಕ, ನಿನ್ನ ಔದಾರ್ಯವನ್ನು ಎಷ್ಟೆಂದು ಹೇಳಲಿ ? ಕಂಸಾಂತಕ, ದುಷ್ಟನಿಗ್ರಹಮಾಡಿ ಶಿಷ್ಟ ಪರಿಪಾಲನೆಯನ್ನು ಕ್ಷಿಪ್ರದಲ್ಲಿ ನಿನ್ನಂತೆ ನೈಮರೆತು ನುಗ್ಗುವ ಕಾರುಣ್ಯಮಯರುಂಟೆ ? ಎಲೈಮಾಧವನೆ ನಿನ್ನಂತೆ ಸಕಲ ಜನರ ಕಣ್ಮನಂಗಳಿಗೆ ಮಧುರವಾದ ಮೂರ್ತಿ ಉಳ್ಳವರಾರು ? ಹೇ ರಾಮಾನುಜ ! ಆಶ್ರಿತರಕ್ಷಣಕ್ಕೆ ಹಾತೊರೆದು ಸರ್ವಪ್ರಯತ್ನಗಳಿಂದಲೂ ಅವರ ಇಷ್ಟಸಿದ್ಧಿಗಾಗಿ ದುಡಿವ ಬಯಕೆಯ ಲೀಲೆಯಿಂದ ಸೇವಾವೃತ್ತಿಯನ್ನೂ ಅವಲಂಬಿಸಬಲ್ಲ ಸೌಶೀಲ್ಯದ ನಿನಗೆ ಸಮರೆಲ್ಲಿ? ಓ ಜಗತ್ರಯದ ಗುರುವೆ ? ದೀನೋದ್ಧರಣಕ್ಕಾಗಿ ಪರಮ ಸಹಾನುಭೂತಿಯಿಂದ ಸರ್ವಸುಲಭವಾದ ಸದುಪಾಯಗಳನ್ನು ಬೋಧಿಸಿದ ನಿನ್ನಂತಹ ನಿಪುಣರುಂಟೆ ? ಎಲೈ ಪುಂಡರೀಕಾಕ್ಷನೆ ಅರ್ಧ ಅರಳಿದ ತಾವರೆಯ ಸೊಬಗಿನ ಸಿರಿಯುಳ್ಳ ಕಣ್ಗಳ ಕಟಾಕ್ಷಮಾತ್ರದಿಂದ ಭಕ್ತಜನರ ಸಂತಾಪವನ್ನುನೀಗಿ ತಂಪೊದಗಿಸುವ ಮಹಾನುಭಾವನೆ, ನಂಬಿದವರನ್ನು ಎಂದೂ ಕೈಬಿಡದ ಸ್ಥಿರಸಂಕಲ್ಪದ ಗೋಪೀಜನರೊಡೆಯಾ, ನನ್ನನ್ನು ರಕ್ಷಿಸು. (ಈ ಕಾರ್ಯದಲ್ಲಿ) ನಿನಗಿಂತಲೂ ಬೇರೆ ಯಾರನ್ನೂ ನಾನು ಕಾಣೆ. (ತಿ

ಭಕ್ತಾಪಾಯ ಭುಜಂಗ ಗಾರುಡಮಣಿ
ಸ್ತ್ರೈಲೋಕ್ಯರಕ್ಷಾಮಣಿಃ
ಗೋಪೀಲೋಚನ ಚಾತಕಾಂಬುದಮಣಿಃ
ಸೌಂದರ್ಯಮುದ್ರಾಮಣಿಃ
ಯಃ ಕಾಂತಾಮಣಿ ರುಕ್ಮಿಣೀ
ಘನಕುಚದ್ವಂದ್ವೈಕಭೂಷಾಮಣಿಃ
ಶ್ರೇಯೋ ದೇವಶಿಖಾಮಣಿರ್ದಿಶತುನೋ
ಗೋಪಾಲಚೂಡಾಮಣಿಃ ॥ [೨೩]

ಭಕ್ತರಿಗುಂಟಾದ ಅಪಾಯಗಳೆಂಬ ಸರ್ಪಗಳಿಗೆ ಗರುಡಮಣಿಯಂತಹನೂ, ಮೂರುಲೋಕದ ರಕ್ಷಣೆಗಾಗಿ ಹೃದಯಕ್ಕೆ ಕಟ್ಟಿದ ರಕ್ಷಾಮಣಿ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಯಂತಹನೂ, ಗೋಪಿಯರ ಕಣ್ಣುಗಳೆಂಬ ಚಾತಕಪಕ್ಷಿಗಳಿಗೆ ಮೇಘಮಣಿಯಂತಹನೂ, ಸೌಂದರ್ಯವನ್ನೆಲ್ಲಾ ಒಂದೆಡೆಸೇರಿಸಿ "ಇದೆ ಎಲ್ಲಿ" ಯೆಂಬಂತೆ ಮುದ್ರಿಸಿಟ್ಟ ರೀತಿದೋರುವ (ದಿವ್ಯಮಂಗಳ ವಿಗ್ರಹದ) ಮುದ್ರಾಮಣಿಯಂಹನೂ, ಕಾಂತಾಮಣಿಯಾದ ರುಕ್ಮಿಣೀದೇವಿಯ ಘನಕುಚ ಮಂಡಲ ದ್ವಿತಯಕ್ಕೆ ಸರ್ವೋತ್ತಮವಾದ ಆಭರಣಮಣಿಯಂತಹನೂ, ದೇವತೆಗಳಿಗೆಲ್ಲಾ ಚೂಡಾಮಣಿಯಂತಹನೂ ಆದ ಗೋಪಾಲ ಶಿಖಾಮಣಿಯು ನಮಗೆ ಶ್ರೇಯಸ್ಸನ್ನು ಕೊಡಲಿ. (೨೩)

ಶತ್ರುಚ್ಛೇದೈಕಮಂತ್ರಂ,
ಸಕಲಮುಪನಿಷದ್ವಾಕ್ಯಸಂಪೂಜ್ಯಮಂತ್ರಂ
ಸಂಸಾರೋತ್ತಾರಮಂತ್ರಂ,
ಸಮುಪಚಿತ ತಮಃಸಂಘನಿರ್ಯಾಣಮಂತ್ರಂ
ಸರ್ವೈಶ್ವರ್ಯೈಕಮಂತ್ರಂ, ವ್ಯಸನ
ಭುಜಗ ಸಂದಷ್ಟ ಸಂತ್ರಾಣಮಂತ್ರಂ
ಜಿಹ್ವೇ ಶ್ರೀಕೃಷ್ಣಮಂತ್ರಂ ಜಪಜಪಸತತಂ
ಜನ್ಮಸಾಫಲ್ಯಮಂತ್ರಂ ॥ [೨೪]

ಎಲೈ ನಾಲಗೆಯೇ ! ಹೊರಗೊಳಗಿನ ಸಮಸ್ತ ಶತ್ರುಗಳನ್ನೂ ನಿಗ್ರಹಿಸಬಲ್ಲ ಒಂದೇ ಒಂದು ವ್ರತವುಂಟು ! ಅದು ಉಪನಿಷದ್ವಾಕ್ಯಗಳೆಲ್ಲವೂ ಏಕಕಂಠತೆಯಿಂದ ಗೌರವಿಸಿ ಸೂಚಿಸುವ ಸಕಲಮಂತ್ರವಾಗಿದೆ. ಸಂಸಾರ ಸಾಗರವನ್ನು ಶ್ರಮವಿಲ್ಲದಂತೆ ಸುಲಭವಾಗಿ ದಾಟಿಸಬಲ್ಲ ದಿವ್ಯಮಂತ್ರವೂ ಅದೇ. ಅಷ್ಟೇಅಲ್ಲ, ಅನಾದಿ ಕಾಲದಿಂದ ಅನುಸರಿಸಿಬಂದ ತಮಸ್ಸಿನ ಸಮೂಹಕ್ಕೆ ಅದು ನಿರ್ಗಮನ ಮಂತ್ರವೂ ಆಗಿದೆ. ಹೆಚ್ಚೇನು ? ಸರ್ವೈಶ್ವರ್ಯವನ್ನೂ ಸಾಧಿಸಿಕೊಡಬಲ್ಲ ಸರ್ವಮಂತ್ರವೂ ವ್ಯಸನವೆಂಬ ಸರ್ಪದಿಂದ ಮುಟ್ಟಲ್ಪಟ್ಟವರನ್ನು ಉದ್ಧರಿಸಬಲ್ಲ ಶುಭಮಂತ್ರವೂ, ಜನ್ಮವನ್ನು

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಸಾರ್ಥಕಮಾಡುವಂತಹ ಸಫಲಮಂತ್ರವೂ ಆ ಮಂತ್ರವೇ ಆಗಿದೆ. ( ಅದಾವುದೆನ್ನುವಿಯೊ ?) ಅದು ಶ್ರೀಕೃಷ್ಣ ಮಂತ್ರವು. ಅದನು ಯಾವಾಗಲೂ ಜಪಿಸು, ಜಪಿಸು. [೨೪]

ವ್ಯಾಮೋಹಪ್ರಶಮೌಷಧಂ
ಮುನಿಮನೋವೃತ್ತಿ ಪ್ರವೃತ್ತ್ಯೌಷಧಂ
ದೈತ್ಯೇಂದ್ರಾರ್ತಿಕರೌಷಧಂ,
ತ್ರಿಭುವನೇ ಸಂಜೀವನೈಕೌಷಧಂ
ಭಕ್ತಾತ್ಯಂತಹಿತೌಷಧಂ
ಭವಭಯಪ್ರಧ್ವಂಸನೈಕೌಷಧಂ
ಶ್ರೇಯಃಪ್ರಾಪ್ತಿಕರೌಷಧಂ
ಪಿಬ ಮನಃ ಶ್ರೀಕೃಷ್ಣ ದಿವ್ಯೌಷಧಂ [೨೫]

ಓ ಮನಸ್ಸೇ ! ಲೋಕದಲ್ಲಿ ಸಕಲೋಪದ್ರವವನ್ನೂ ಶಮನಮಾಡಬಲ್ಲ, ಒಂದು ಸಿದ್ಧೌಷಧವಿದೆ. (ಅದು ಪರಮರಹಸ್ಯವಾದ ದಿವ್ಯೌಷಧ) ಮುನಿಗಳ ಮನಸ್ಸಿಗೆ ಅದು ಮನನ ಶೀಲತೆಯನ್ನುಂಟುಮಾಡುವ ಔಷಧ. (ಉದ್ಧತರಾದ) ದೈತ್ಯಪತಿಗಳಿಗೆದೈನ್ಯವನ್ನೊದಗಿಸಬಲ್ಲ ದಮನೌಷಧವೂ ಅದೇ. ಆ ಮಹೌಷಧವು ತ್ರಿಭುವನವನ್ನೂ ಉಜ್ಜೀವನಗೊಳಿಸಬಲ್ಲ ಸಂಜೀವನೌಷಧವೂ ಆಗಿದೆ. ಭಕ್ತನಾದವನಿಗೆ ಪರಮಹಿತಕರವಾದ ವಿಹಿತೌಷಧವೂ, ಸಂಸಾರಭಯವನ್ನು ನಿರ್ಮೂಲಗೊಳಿಸತಕ್ಕ ಏಕೌಷಧವೂ, ಶ್ರೇಯಸ್ಸನ್ನು ಶೀಘ್ರವಾಗಿ ಒದಗಿಸಬಲ್ಲ ಪರಮೌಷಧವೂ ಆದ ಆ ಶ್ರೀಕೃಷ್ಣ (ನೆಂಬ)ದಿವ್ಯೌಷಧವನ್ನು ಸೇವಿಸು. [೨೫]

ಆಮ್ನಾಯಾಭ್ಯಸನಾನ್ಯರಣ್ಯರುದಿತಂ
ವೇದವ್ರತಾನ್ಯನ್ವಹಂ। ಮೇದಶ್ಛೇದಫಲಾನಿ



CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪೂರ್ತವಿಧಯಃ ಸರ್ವೇಹುತಂ ಭಸ್ಮನಿ॥
ತೀರ್ಥಾನಾಮವಗಾಹನಾನಿಚಗಜಸ್ನಾನಂ ವಿನಾ
ಯತ್ಪದ ದ್ವಂದ್ವಾಂಭೋರುಹಸಂಸ್ಮೃತೀರ್ವಿಜಯತೇ
ದೇವಃಸನಾರಾಯಣಃ॥ [೨೬]

ಯಾವ ಮಹಾಮಹಿಮನ ದಿವ್ಯಪಾದರವಿಂದದ್ವಂದ್ವದ ಸ್ಮರಣೆಯಿಲ್ಲದಂತೆ ಮಾಡುವ ವೇದಾಭ್ಯಾಸಗಳು ಅರಣ್ಯರೋದನದಂತೆಯೂ, ವೇದ ವ್ರತನಿಯಮಾದಿಗಳು ಬುದ್ಧಿಕ್ಲೇಶಮಾತ್ರ ಫಲಗಳಂತೆಯೂ, ಹೋಮಹವನಗಳು ಬೂದಿಯಲ್ಲಿಮಾಡಿದ ಹೋಮಗಳಂತೆಯೂ ಪುಣ್ಯತೀರ್ಥಗಳಲ್ಲಿ ಮಾಡುವ ಮಜ್ಜನವು ಆನೆಗಳನ್ನು ಅಲುಬಿದಂತೆಯೂ ಆಗಿ ವ್ಯರ್ಥವೆನಿಸುವುವೋ ಆ ಪರಮಪ್ರಭುವಾದ ನಾರಾಯಣನು ಸರ್ವೋತ್ಕೃಷ್ಟನಾಗಿರುವನು. [೨೬]

ಶ್ರೀಮನ್ನಾಮಪ್ರೋಚ್ಯನಾರಾಯಣಾಖ್ಯಂ
ಕೇನಾಪ್ರಾಪ್ತಂವಾಂಛಿತಂ ಪಾಪಿನಾಪಿ॥
ಹಾ ನಃಪೂರ್ವಂ ವಾಕ್ಪ್ರವೃತ್ತಾ ನತಸ್ಮಿ
ಕ್ಷೇನಪ್ರಾಪ್ತಂ ಗರ್ಭವಾಸಾದಿ ದುಃಖಂ॥ [೨೭]

ಪಾಪಿಷ್ಟನೇ ಆಗಿದ್ದರೂ ಲೋಕದಲ್ಲಿ 'ನಾರಾಯಣ' ಎಂಬ ಶ್ರೀಮನ್ನಾಮವನ್ನು ಉಚ್ಚರಿಸಿ ಯಾವನು ತಾನೆ ಇಷ್ಟಾರ್ಥವನ್ನು ಹೊಂದಲಿಲ್ಲ. ಅಯ್ಯೋ! ನಮ್ಮವಾಕ್ಕು ಹಿಂದೆ ಆದರಲ್ಲಿ ತೊಡಗಲಿಲ್ಲ. ಅದರಿಂದಲೇ ಗರ್ಭವಾಸವೇ ಮೊದಲಾದ ದುಃಖವೆಲ್ಲವೂ ನಮಗೆ ಒದಗಿದುದು!. [೨೭]

ಮಜ್ಜನ್ಮನಃಫಲಮಿದಂ ಮಧುಕೈಟಭಾರೇ,
ಮತ್ಪ್ರಾರ್ಥನೀಯ ಮದನುಗ್ರಹ ಏಷಏವ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತ್ವದ್ಭೃತ್ಯಭೃತ್ಯಪರಿಚಾರಕಭೃತ್ಯ ಭೃತ್ಯ
ಭೃತ್ಯಸ್ಯಭೃತ್ಯ ಇತಿ ಮಾಂ ಸ್ಮರ ಲೋಕನಾಥ॥ [೨೮]

ಎಲೈ ಮಧುಕೈಟಭಾರಿಯೇ, ನಾನು ಜನ್ಮವೆತ್ತಿದುದಕ್ಕೆ ಆಗಬೇಕಾದ ಫಲವಿದೊಂದು. ನಾನು ನಿನ್ನನ್ನು ಬೇಡತಕ್ಕದೂ ನನಗೆ ನೀನು ಅನುಗ್ರಹಿಸಬೇಕಾಗಿರುವುದೂ ಇದೊಂದುಮಾತ್ರ:—ಲೋಕನಾಥ! ನಿನ್ನ ಭೃತ್ಯರ ಭೃತ್ಯರ ಪರಿಚಾರಕರಾದವರ ಭೃತ್ಯರ ಸೇವಕರ ಸೇವಕರ ಸೇವಕನನ್ನಾಗಿ ನನ್ನನ್ನು ಎಣಿಸು. [೨೮]

ನಾಥೇನಃಪುರುಷೋತ್ತಮೇ ತ್ರಿಜಗತಾ
ಮೇಕಾಧಿಪೇ ಚೇತಸಾ
ಸೇವ್ಯೇ ಽಸ್ವಸ್ಯಪದಸ್ಯ ದಾತರಿಸುರೇ
ನಾರಾಯಣೇತಿಷ್ಠತಿ
ಯಂಕಂಚಿತ್ಪುರುಷಾಧಮಂ ಕತಿಪಯ
ಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ ನರಮಹೋ
ಮೂಢಾ ವರಾಕಾ ವಯಂ॥ [೨೯]

ಅಯ್ಯೋ! ನಾವು ಎಂತಹ ಮೂಢರು, ಅಲ್ಪರು ಪುರುಷೋತ್ತಮನಾಗಿಯೂ ಮೂರುಲೋಕಗಳಿಗೂ ಏಕಾಧಿಪತಿಯಾಗಿಯೂ ಮನಸ್ಸಿನಿಂದ ನೆನದಮಾತ್ರದಲ್ಲಿ ತನ್ನದಿವ್ಯಪದವಿಯನ್ನೂ ಕೂಡ ಅನುಗ್ರಹಿಸಲಿರುವ ದೇವದೇವನಾಗಿಯೂ ಪ್ರಸಿದ್ಧನಾದ ನಾರಾಯಣನು ಇರುವಲ್ಲಿ—ಒಂದೆರಡು ಗ್ರಾಮಗಳಿಗೆ ಒಡೆಯನೂ ಅಲ್ಪಫಲಗಳನ್ನು ಮಾತ್ರ ಕೊಡಬಲ್ಲವನೂ ಹುಲುಮಾನವನೂ ಆದ ಯಾವ ನಾದರೂ ಪುರುಷಾಧಮನನ್ನು ಸೇವಿಸಲಿಕ್ಕಾಗಿ ಪ್ರಾತೊರೆದು ಹುಡುಕುವೆವಲ್ಲ ಆಶ್ಚರ್ಯ! ಆಶ್ಚರ್ಯ! [೨೯]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಮದನ ! ಪರಿಹರಸ್ಥಿತಿಂ ಮದೀಯೇ
ಮನಸಿ ಮುಕುಂದ ಪದಾರವಿಂದಧಾಮ್ನಿ
ಹರನಯನ ಕೃಶಾನುನಾ ಕೃಶೋಽಸಿ
ಸ್ಮರಸಿನಚಕ್ರಪರಾಕ್ರಮಂ ಮುರಾರೇಃ॥ ✓ [೩೦]

ಎಲೈ ಮನ್ಮಥನೆ! ಮುಕಂದನ ಪಾದಾರವಿಂದಕ್ಕೆ ನೆಲೆಯಾದ ಈ ನನ್ನ ಮನಸ್ಸಿನಿಂದ ನಿನ್ನ ಬೀಡನ್ನುತಿಗೆ ಜೋಕೆ ! ನೀನು ಮೊದಲೆ ರುದ್ರನ ಹಣೆಗಣ್ಣಿನುರಿಯಿಂದ ಉರಿದು ಕೃಶನಾಗಿರುವೆ ಮುರಹರನ ದಿವ್ಯಚಕ್ರದ ಪರಾಕ್ರಮದ ನೆನಪು ನಿನಗಿಲ್ಲವೇನು ? [೩೦]

ತತ್ತ್ವಂಬ್ರುವಾಣಾನಿ ಪರಂ ಪರಸ್ತಾತ್
ಮಧುಕ್ಷರಂತೀವ ಸತಾಂ ಫಲಾನಿ
ಪ್ರಾವರ್ತಯ ಪ್ರಾಂಜಲಿರಸ್ಮಿ ಜಿಹ್ವೇ
ನಾಮಾನಿ ನಾರಾಯಣ ಗೋಚರಾಣಿ॥ [೩೧]

ಎಲೈ ಯೆನ್ನನಾಲಗೆಯೇ ! ನಿನ್ನನ್ನು ಕೈಜೋಡಿಸಿ ಬೇಡಿಕೊಳ್ಳುತ್ತೇನೆ. ಸತ್ಪುರುಷರಿಗೆ ಮಧುವನ್ನು ಸೂಸುವ ದಿವ್ಯ ಫಲಗಳಂತಿರುವ ನಾರಾಯಣನ ನಾಮಗಳು ಗೋಚರಿಸುವಂತೆ ವರ್ತಿಸು. (ಸಂಕೀರ್ತನೆ ಮಾಡು ) [೩೧]

ಇದಂ ಶರೀರಂ ಪರಿಣಾಮ ಪೇಶಲಂ
ಪತತ್ಯವಶ್ಯಂ ಶ್ಲಥಸಂಧಿ ಜರ್ಝರಂ
ಕಿಮೌಷಧೈಃ ಕ್ಲಿಶ್ಯಸಿ ? ಮೂಢ, ದುರ್ಮತೇ,
ನಿರಾಮಯಂ ಕೃಷ್ಣರಸಾಯನಂ ಪಿಬ॥ [೩೨]

ಎಲೈ ತಿಳಿಗೇಡಿಯಾದ ಮೂಢಬುದ್ಧಿಯ ಮಾನವನೆ ! ಈ ಶರೀರವು ಎಂದಿದ್ದರೂ ನಶ್ವರವು. ಸಂಧಿಬಂಧಗಳು ಶಿಥಿಲವಾಗಿ ಜರ್ಝರಿತ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ವಾಗಿ ಎಂದಿದ್ದರೂ ಕಡ್ಡಾಯವಾಗಿ ಬಿದ್ದುಹೋಗತಕ್ಕದ್ದು. ಹೀಗಿರುವಾಗ ಸುಮ್ಮನೆ ಔಷಧಿಗಳಿಂದ ಏಕೆ ಕ್ಲೇಶಗೊಳ್ಳುತ್ತೀಯೆ ? ನಿನ್ನನ್ನು (ಎಂದೆಂದೂ) ನೀರೋಗಿಯನ್ನಾಗಿ ಮಾಡತಕ್ಕ ಕೃಷ ರಸಾಯನವನ್ನು ಸೇವಿಸು. [೩೨]

ದಾರಾ ವಾರಾಕರವರಸುತಾ ತೇ
ತನೂಜೋವಿರಿಂಚಃ
ಸ್ತೋತಾವೇದಸ್ತವ, ಸುರಗಣೋ
ಭೃತ್ಯವರ್ಗಃ, ಪ್ರಸಾದಃ
ಮುಕ್ತಿರ್ಮಾಯಾ ಜಗದವಿಕಲಂ
ತಾವಕೀ, ದೇವಕೀ ತೇ ಮಾತಾ, ಮಿತ್ರಂ ವಲರಿಪು
ಸುತಸ್ತ್ವಯ್ಯತೋನ್ಯಂ ನಜಾನೇ [೩೩]

ಪ್ರಭುವೆ, ನಿನ್ನ ವಿಚಾರದಲ್ಲಿ ನಾನು ತಿಳಿದಿರುವುದು ಇಷ್ಟುಮಾತ್ರ ! ನಿನ್ನ ಪ್ರಿಯಪತ್ನಿಯು (ನಿಖಿಲ ಜಗನ್ಮಂಗಳ ಸ್ವರೂಪಿಣಿಯಾದ) ಸಮುದ್ರ ರಾಜನ ಮಗಳು ಶ್ರೀದೇವಿಯು, ನಿನ್ನ ಪುತ್ರನು (ಸಮಸ್ತಜಗತ್ತಿನ ಸೃಷ್ಟಿಯಲ್ಲಿ ನಿರತನಾದ) ಬ್ರಹ್ಮದೇವನು, ವೇದಪುರುಷನೋ ನಿನ್ನಸ್ತೋತ್ರದಲ್ಲಿ ನಿರತನಾದವನು, ಸಮಸ್ತ ದೇವಗಣವೂ ನಿನ್ನ ಸೇವಕವರ್ಗಕ್ಕೆ ಸೇರಿದುದು ನಿನ್ನ ಅನುಗ್ರಹವಾದರೋ ಪರಮಪುರುಷಾರ್ಥವಾದ ಮುಕ್ತಿಯು, ಅಖಂಡಜಗತ್ತೂ ನಿನ್ನಮಾಯೆಯೆನಿಸಿದೆ. (ಭಕ್ತಪರಾಧೀನನೂ, ಅರ್ಥಿಕಲ್ಪಕನೂ, ಆಶ್ರಿತ ವಾತ್ಸಲ್ಯೈಕ ಜಲನಿಧಿಯೂ ಆಗಿ ಅವತರಿಸಿದ) ನಿನಗೆ ದೇವಕಿದೇವಿ ತಾಯಾದವಳು. (ಸಾಮಾನ್ಯ ಮಾನವ ಕೋಟಿಗೆ ಸೇರಿದ್ದರೂ ಭಜನಶೀಲತೆಯಿಂದಲೂ ನಿನ್ನ ಸೌಶೀಲ್ಯದಿಂದಲೂ) ಇಂದ್ರಪುತ್ರನಾದ ಅರ್ಜುನನು ನಿನ್ನ ಗೆಳೆಯನಾಗಿ ಆರಿಸಲ್ಪಟ್ಟವನು. ನಿನ್ನ ವಿಷಯವಾಗಿ ನಾನು ಬೇರೆ ಏನನ್ನೂ ಅರಿಯೆ (ಮತ್ತೆ ಏನನ್ನು ಅರಿಯಬೇಕಾಗಿದೆ ? ) [೩೩]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಕೃಷ್ಣೋರಕ್ಷತು ನೋಜಗತ್ರಯಗುರುಃ
ಕೃಷ್ಣಂ ನಮಸ್ಯಾಮ್ಯಹಂ
ಕೃಷ್ಣೇನಾಮರಶತ್ರವೋ ವಿನಿಹತಾಃ
ಕೃಷ್ಣಾಯತಸ್ಮೈನಮಃ
ಕೃಷ್ಣಾದೇವ ಸಮುತ್ಥಿತಂ ಜಗದಿದಂ
ಕೃಷ್ಣಸ್ಯ ದಾಸೋಽಸ್ಮ್ಯಹಂ
ಕೃಷ್ಣೇ ತಿಷ್ಠತಿ ವಿಶ್ವಮೇತದಖಿಲಂ
ಶ್ರೀಕೃಷ್ಣ ರಕ್ಷಸ್ವ ಮಾಂ ॥ [೩೪]

ಜಗತ್ರಯ ಗುರುವಾದ ಶ್ರೀಕೃಷ್ಣನು ನಮ್ಮನ್ನು ಕಾಪಾಡಲಿ. ಶ್ರೀಕೃಷ್ಣನನ್ನು ನಮಸ್ಕರಿಸುತ್ತೇನೆ. ಶ್ರೀಕೃಷ್ಣನಿಂದ ಅಮರ ಶತ್ರುಗಳು ನಾಶಹೊಂದಿದರು. ಆ ಶ್ರೀಕೃಷ್ಣನಿಗೆ ನಮಸ್ಕಾರವು. ಈ ಜಗತ್ತು ಶ್ರೀಕೃಷ್ಣನಿಂದಲೇ ಉದ್ಭವಿಸಿತು. ಶ್ರೀಕೃಷ್ಣನ ದಾಸನಾನು. ಈ ಸಮಸ್ತವಿಶ್ವವೂ ಶ್ರೀಕೃಷ್ಣನಲ್ಲಿಯೇ ನಿಂತಿದೆ. ಎಲೈ ಶ್ರೀಕೃಷ್ಣನೇ, ನನ್ನನ್ನು ರಕ್ಷಿಸಪ್ಪ. [೩೪]

ತತ್ತ್ವಂಪ್ರಸೀದ ಭಗವರ್ನ್ ಕುರುಮಯ್ಯ ನಾಥೇ
ವಿಷ್ಣೋ ಕೃಪಾಂ ಪರಮ ಕಾರುಣಿಕಃಕಿಲತ್ವಂ
ಸಂಸಾರಸಾಗರ ನಿಮಗ್ನ ಮನಂತ ದೀನ
ಮುದ್ಧರ್ತುರ್ಮ ಮರ್ಹಸಿ ಹರೇ ಪುರುಷೋತ್ತಮೋಽಸಿ॥ [೩೫]

ಭಗವರ್ನ್, ಸರ್ವವ್ಯಾಪಕ, ಪ್ರಸನ್ನನಾಗು. ಅನಾಥನಾದ ನನ್ನಲ್ಲಿ ದಯೆಯನ್ನು ತೋರು. ನೀನುಪರಮ ಕಾರುಣಿಕನಲ್ಲವೆ ? ಸಂಸಾರಸಾಗರದಲ್ಲಿ ಮುಳುಗಿ ತೊಳಲುತ್ತಿರುವ ಈ ದೀನನನ್ನು ಉದ್ಧರಿಸಲು ನೀನು ಅರ್ಹನಾಗಿರುವೆ. ಪುರುಷೋತ್ತಮ ನೆನಿಸಿರುವೆ (ಮತ್ತ್ಯಾರು ನನ್ನನ್ನು ಉದ್ಧರಿಸಬಲ್ಲರು. ) [೩೫]

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ನಮಾಮಿ ನಾರಾಯಣ ಪಾದಪಂಕಜಂ
ಕರೋಮಿ ನಾರಾಯಣ ಪೂಜನಂ ಸದಾ
ವದಾಮಿ ನಾರಾಯಣನಾಮ ನಿರ್ಮಲಂ
ಸ್ಮರಾಮಿ ನಾರಾಯಣ ತತ್ವಮವ್ಯಯಂ॥ [೩೬]

ನಾನು ಯಾವಾಗಲೂ ನಾರಾಯಣನ ಪಾದಪದ್ಮಕ್ಕೆ ನಮಸ್ಕರಿಸುತ್ತೇನೆ ನಾರಾಯಣನ ಪಾದಪೂಜನವನ್ನು ಮಾಡುತ್ತೇನೆ. ನಾನು ಯಾವಾಗಲೂ ಉಚ್ಚರಿಸುವ ನಾರಾಯಣನ ದಿವ್ಯನಿಮರ್ಲ ನಾಮವನ್ನು. ಸ್ಮರಣೆಮಾಡುವುದು ಶಾಶ್ವತವಾದ ನಾರಯಣನ ತತ್ವವನ್ನು. [೩೬]

ಶ್ರೀನಾಥ, ನಾರಾಯಣ, ವಾಸುದೇವ
ಶ್ರೀಕೃಷ್ಣ, ಭಕ್ತಪ್ರಿಯ ಚಕ್ರಪಾಣೇ
ಶ್ರೀಪದ್ಮನಾಭಾಚ್ಯುತ, ಕೈಟಭಾರೇ
ಶ್ರೀರಾಮ, ಪದ್ಮಾಕ್ಷ ಹರೇ ಮುರಾರೆ ॥ [೩೭]

ಶ್ರೀನಾಥ, ನಾರಾಯಣ, ವಾಸುದೇವ, ಶ್ರೀಕೃಷ್ಣ, ಭಕ್ತಪ್ರಿಯ, ಚಕ್ರಪಾಣಿ, ಶ್ರೀಪದ್ಮನಾಭ, ಅಚ್ಯುತ, ಕೈಟಭಾರೀ, ಶ್ರೀರಾಮ, ಪದ್ಮಾಕ್ಷ, ಹರೀ, ಮುರಾರೀ, ಅನಂತ, ವೈಕುಂಠ, ಮುಕುಂದ, ಕೃಷ್ಣ, ಗೋವಿಂದ, ದಾಮೋದರ, ಮಾಧವ, [೩೭]

ಅನಂತ, ವೈಕುಂಠ, ಮುಕುಂದ, ಕೃಷ್ಣ
ಗೋವಿಂದ ದಾಮೋದರಮಾಧವೇತಿ
ವಕ್ತುಂಸಮರ್ಥೋಽಪಿ ನವಕ್ತಿ ಕಶ್ಚಿತ್
ಅಹೋ! ಜನಾನಾಂ ವ್ಯಸನಾಭಿಮುಖ್ಯಂ ॥ [೩೮]

ಹೀಗೆಂಬುದಾಗಿ ನಾಲಗೆಯಲ್ಲಿ ನುಡಿಯುವ ಸಾಮರ್ಥ್ಯವಿದ್ದರೂ ಒಬ್ಬೊಬ್ಬರು ನುಡಿಯುವುದಿಲ್ಲ ಆಹಹ! ಲೋಕದಲ್ಲಿ ಜನರು ದುರ್ವ್ಯಸನ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಗೆಳಕಡೆಗೆ ಎಷ್ಟು ಮಟ್ಟಿಗೆ ತಿರುಗಿದ್ದಾರೆಂಬುದು ಆಶ್ಚರ್ಯಕರವಾಗಿದೆ. [೩೮]

ಧ್ಯಾಯಂತಿ ಯೇ ವಿಷ್ಣುಮನಂತಮವ್ಯಯಂ
ಹೃತ್ಪದ್ಮಮಧ್ಯೇ ಸತತಂ ವ್ಯವಸ್ಥಿತಂ
ಸಮಾಹಿತಾನಾಂ ಸತತಾಭಯಪ್ರದಂ
ತೇ ಯಾಂತಿ ಸಿದ್ಧಿಂ ಪರಮಾಂ ಚ ವೈಷ್ಣವೀಂ॥ ]೩೯]

ಲೋಕದಲ್ಲಿ ಯಾರು ಸರ್ವವ್ಯಾಪಿಯೂ, ಅನಂತನೂ, ವಿಕಾರರಹಿತನೂ, ಸಕಲರಹೃದಯದಪದ್ಮದಲ್ಲಿಯೂ ನಿರಂತರವಾಗಿ ನೆಲಸಿರುವವನೂ ಆಶ್ರಿತರಿಗೆ ಯಾವಾಗಲೂ ಅಭಯಪ್ರದನೂ ಆಗಿರುವ ಆ ಭಗವಂತನನ್ನು ಧ್ಯಾನಮಾಡುತ್ತಾರೋ ಅಂತಹವರು ಉತ್ತಮೋತ್ತಮವಾದ ವೈಷ್ಣವೀಸಿದ್ಧಿಯನ್ನು ಪಡೆಯುವರು . [೩೯]

ಕ್ಷೀರಸಾಗರತರಂಗಶೀಕರಾ
ಸಾರತಾರಕಿತಚಾರುಮೂರ್ತಯೇ
ಭೋಗಿ ಭೋಗ ಶಯನೀಯ ಶಾಯಿನೇ
ಮಾಧವಾಯ ಮಧುವಿದ್ವಿಷೇ ನಮಃ॥ [೪೦]

ಯಾವನ ಗಗನನೀಲವಾದ ದಿವ್ಯಮೂರ್ತಿಯಮೇಲೆ ಕ್ಷೀರಸಾಗರದ ಅಲೆಗಳಿಂದ ತುಂತುರುಹನಿಗಳು ಹಾರಿಬಂದುಕುಳಿತು ನಕ್ಷತ್ರಗಳಂತೆ ಮನೋಹರವಾಗಿ ಕಂಗೊಳಿಸುವುವೋ, ಯಾವನು ಮಹಾಶೇಷನ ದಿವ್ಯ ಶರೀರದ ಮೃದುವಾದ ಹಾಸಿಗೆಮೇಲೆ ಪವಡಿಸಿ ಆನಂದಮಯನಾಗಿರುವನೋ ಆ ಮಧುಸೂದನನಾದ ಮಾಧವನಿಗೆ ನಮಸ್ಕಾರವು. [೪೦]

ಯಸ್ಯಪ್ರಿಯೌಶ್ರುತಿಧರೌ ಕವಿಲೋಕ ವೀರೌ
ಮಿತ್ರೇ ದ್ವಿಜನ್ಮವರಪದ್ಮಶರಾವಭೂತಾಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ತೇನಾಂಬುಜಾಕ್ಷ ಚರಣಾಂಬುಜ ಷಟ್ಪ್ರದೇನ
ರಾಜ್ಞಾ ಕೃತಾಕೃತಿರಿಯಂ ಕುಲಶೇಖರೇಣ॥ [೪೧]

ಕವಿಗಳೂ ಲೋಕವೀರರೂ ವೇದಪಾರಂಗತರೂ ಎನಿಸಿ ವಿಪ್ರ ಶ್ರೇಷ್ಠರಾದ ಪದ್ಮ, ಶರ ಎಂಬ ಇಬ್ಬರು ಮಹನೀಯುರ ಯಾರಿಗೆ ಪ್ರಿಯ ಮಿತ್ರರೆನಿಸಿದರೋ ಅಂತಹ ಶ್ರೀ ಪುಂಡರೀಕಾಕ್ಷ ಪಾದಪದ್ಮಭ್ರಮರ ನಾದ ಕುಲಶೇಖರರಾಜನಿಂದ ಈ ಕೃತಿಯು ರಚಿಸಲ್ಪಟ್ಟಿತು. [೪೧]

— ಶ್ರೀ —

— ಶ್ರೀ ಕುಲಶೇಖರಾಳ್ವಾರ್ ತಿರುವಡಿಗಳೇ ಶರಣಂ—

## ವೇದಸಾರ ಶಿವಸ್ತವಃ

ಪಶೂನಾಂಪತಿಂ ಪಾಪನಾಶಂ ಪರೇಶಂ ।
ಗಜೇಂದ್ರಸ್ಯಕೃತ್ತಿಂವಸಾನಂವರೇಣ್ಯಂ ।
ಜಟಾಜೂಟಮಧ್ಯೇಸ್ಫುರದ್ಗಾಂಗವಾರಿಂ ।
ಮಹಾದೇವಮೇಕಂ ಸ್ಮರಾಮಿಸ್ಮರಾರಿಂ ॥೧॥
ಮಹೇಶಂಸುರೇಶಂ ಸುರಾರಾತಿನಾಶಂ ।
ವಿಭುಂ ವಿಶ್ವನಾಥಂ ವಿಭೂತ್ಯಂಗಭೂಷಂ ।
ವಿರೂಪಾಕ್ಷಂ ಇಂದ್ವರ್ಕವಹ್ನಿತ್ರಿನೇತ್ರಂ ।
ಸದಾನಂದ ಮೀಡೇ ಪ್ರಭುಂ ಪಂಚವಕ್ತ್ರಂ ॥೨॥
ಗಿರೀಶಂ ಗಣೇಶಂ ಗಲೇ ನೀಲವರ್ಣಂ ।
ಗವೇಂದ್ರಾಧಿರೂಢಂ ಗಣಾತೀತರೂಪಂ ।
ಭವಂ ಭಾಸ್ವರಂ ಭಸ್ಮನಾ ಭೂಷಿತಾಂಗಂ ।
ಭವಾನೀಕಲತ್ರಂ ಭಜೇ ಪಂಚವಕ್ತ್ರಂ ॥೩॥
ಶಿವಾಕಾಂತ ಶಂಭೋ ಶಶಾಂಕಾರ್ಧಮೌಲೇ ।
ಮಹೇಶಾನ ಶೂಲಿನ್ ಜಟಾಜೂಟಧಾರಿನ್ ।
ತ್ವಮೇಕೋ ಜಗದ್ವ್ಯಾಪಕೋ ವಿಶ್ವರೂಪ ।
ಪ್ರಸೀದ ಪ್ರಸೀದ ಪ್ರಭೋ ಪೂರ್ಣರೂಪ ॥೪॥

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.



ಪರಾತ್ಮಾನ ಮೇಕಂ ಜಗದ್ಬೀಜ ಮಾದ್ಯಂ ।
ನಿರೀಹಂ ನಿರಾಕಾರ ಮೋಂಕಾರ ವೇದ್ಯಂ ।
ಯತೋ ಜಾಯತೇ ಪಾಲ್ಯತೇಯೇನವಿಶ್ವಂ ।
ತಮೀಶಂ ಭಜೇ ಲೀಯತೇ ಯತ್ರವಿಶ್ವಂ ॥೫॥
ನಭೂಮಿರ್ನ ಚಾಪೋನ ವಹ್ನಿರ್ನವಾಯುಃ ।
ನ ಚಾಕಾಶಮಾಸ್ತೇ ನ ತಂದ್ರಾ ನ ನಿದ್ರಾ ।
ನ ಚೋಷ್ಣೋ ನ ಶೀತಂ ನ ದೇಶೋ ನ ವೇಷಃ ।
ನಯಸ್ಯಾಸ್ತಿಮೂರ್ತಿಃ ತ್ರಿಮೂರ್ತಿಂ ತಮೀಡೇ ॥೬॥
ಅಜಂ ಶಾಶ್ವತಂ ಕಾರಣಂ ಕಾರಣಾನಾಂ ।
ಶಿವಂ ಕೇವಲಂ ಭಾಸಕಂ ಭಾಸಕಾನಾಂ ।
ತುರೀಯಂ ತಮಃಪಾರಂ ಆದ್ಯಂತಹೀನಂ ।
ಪ್ರಪದ್ಯೇ ಗುರುಂ ಪಾವನಂ ದ್ವೈತ ಹೀನಂ ॥೭॥
ನಮಸ್ತೇ ನಮಸ್ತೇ ವಿಭೋ ವಿಶ್ವಮೂರ್ತೇ ।
ನಮಸ್ತೇ ನಮಸ್ತೇ ಚಿದಾನಂದಿ ಮೂರ್ತೇ ।
ನಮಸ್ತೇ ನಮಸ್ತೇ ತಪೋಯೋಗಗಮ್ಯ ।
ನಮಸ್ತೇ ನಮಸ್ತೇ ಶ್ರುತಿಜ್ಞಾನ ಗಮ್ಯ ॥೮॥
ಪ್ರಭೋ ಶೂಲಪಾಣೆ ವಿಭೋ ವಿಶ್ವನಾಥ ।
ಮಹಾದೇವ ಶಂಭೋ ಮಹೇಶ ತ್ರಿನೇತ್ರ ।
ಶಿವಾಕಾಂತ ಶಾಂತ ಸ್ಮರಾರೇ ಪುರಾರೇ ।
ತ್ವದನ್ಯೋ ವರೇಣ್ಯೋ ನಮಾನ್ಯೋ ನ ಗಣ್ಯಃ ॥೯॥
ಶಂಭೋ ಮಹೇಶಕರುಣಾಮಯ ಶೂಲಪಾಣೇ ।
ಗೌರೀಪತೇ ಪಶುಪತೇ ಪಶುಪಾಶನಾಶಿನ್ ।
ಕಾಶೀಪತೇ ಕರುಣಯಾ ಜಗದೇತದೇಕಃ ।
ತ್ವಂ ಹಂಸಿಪಾಸಿ ವಿದಧಾಸಿ ಮಹೇಶ್ವರೋಸಿ ॥೧೦॥
ತ್ವತ್ತೋ ಜಗದ್ಭವತಿ ದೇವ ಭವ ಸ್ಮರಾರೇ ।
ತ್ವಯ್ಯೇವ ತಿಷ್ಠತಿ ಜಗನ್ಮೃಡ ವಿಶ್ವನಾಥ ।
ತ್ವಯ್ಯೇವ ಗಚ್ಛತಿ ಲಯಂ ಜಗದೇತದೀಶ ।
ಲಿಂಗಾತ್ಮಕಂ ಹರ ಚರಾಚರ ವಿಶ್ವರೂಪಿನ್ ॥೧೧॥

ಶ್ರೀಮಚ್ಛಂಕರಾಚಾರ್ಯ ವಿರಚಿತಂ
ವೇದಸಾರ ಶಿವಸ್ತೋತ್ರಂ
ಸಂಪೂರ್ಣಂ

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ಶುದ್ಧಾಶುದ್ಧ



| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| II | ೩ | ಭ್ರಮಿಸಿ | ಭ್ರಮುಸಿ |
| ,, | ೯ | ಶಾಲ್ಮಲಿಕುಸಮೇಸ್ಥಲ | ಶಾಲ್ಮಲಿಕುಸುಮೇಸ್ಥಲ |
| ,, | ೧೪ | ಗಂಧಫಲೇ | ಗಂಧಫಲೀ |
| ,, | ೧೫ | ಭ್ರಮಿಸಿ | ಭ್ರಮುಸಿ |
| ,, | ೧೭ | ಶೃಣುಸುಖ | ಶ್ರುಣುಸುಖ |
| ೨ | ೧ | ಪಿತಾಮಹಸ್ತ್ವಂ | ಪ್ರಜಾಪತಿಸ್ತ್ವಂ |
| ,, | ೪ | ನಮಸ್ತೆ | ನಮಸ್ತೇ |
| ,, | ೧೦ | ಮಹಮೀಶಮಿಡ್ಯಂ | ಮಹಮೀಶಮೀಡ್ಯಂ |
| ೩ | ೨ | ಗುರುರ್ದೇವ್ರೊ ಮಹೇಶ್ವರಃ | ಗುರುರ್ದೇವೋ ಮಹೇಶ್ವರಃ |
| ೯ | ೩ | ದ್ವಂದ್ವಗ | ದ್ವಂದ್ವ |
| ೧೦ | ೧ | ಪ್ರಯಚ್ಚ | ಪ್ರಯಚ್ಛ |
| ೧೧ | ೧೩ | ದರ್ಶನಮಾಡಿರಿ | ದರ್ಶನಮಾಡು |
| ,, | ೧೭ | ಶೃಣುತಪ್ರಸೂತಿ | ಶ್ರುಣುತಪ್ರಸೂತಿ |
| ,, | ೨೧ | ಅಂತರ್ಜೋತಿ | ಅಂತರ್ಜೋತಿ |
| ೧೨ | ೨ | ನಿರ್ಯಾಣ | ನಿರ್ವಾಣ |
| ,, | ೧೦ | ಶೃಣುತ | ಶ್ರುಣುತ |
| ೧೩ | ೨೧ | ಬುದ್ಧೇನಾಂಜಲಿನಾ | ಬದ್ಧೇನಾಂಜಲಿನಾ |
| ೧೪ | ೨ | ಭಾಷ್ಪಾಂಬುನಾ | ಬಾಷ್ಪಾಂಬುನಾ |
| ,, | ೧೭ | ಜಗತ್ರಯಗುರೋ | ಜಗತ್ತ್ರಯಗುರೋ |
| ೧೫ | ೭ | ವೃತಿಯನ್ನೂ | ವೃತ್ತಿಯನ್ನೂ |
| ,, | ೨೧ | ಶ್ರೇಂಯೋ | ಶ್ರೇಯೋ |
| ೧೬ | ೮ | ಶತ್ರುಚೇದೈಕಮಂತ್ರಂ | ಶತ್ರುಚ್ಛೇದೈಕಮಂತ್ರಂ |

CC-0. Bhagavad Ramanuja National Research Institute, Melukote Collectio

Funding: Tattva Heritage Foundation,Kolkata. Digitization: eGangotri.



| | | | |
|---|---|---|---|
| ೧೬ | ೧೦ | ಸಂಸಾರೋತ್ತಾರಮಂತ್ಪಂ | ಸಂಸಾರೋತ್ತಾರ ಮಂತ್ರಂ |
| ,, | ೨೧ | ಹೆಚ್ಚಿಸು | ಹೆಚ್ಚೇನು |
| ೧೭ | ೭ | ತ್ರಿಭುವನೇ | ತ್ರಿಭುವನೀ |
| ೧೮ | ೧೩ | ಪ್ರಾಪ್ತಂ ವಾಂಛಿತಂ | ಪ್ರಾಪೂರ್ವಾಂಛಿತಂ |
| ,, | ೧೫ | ಕೇನಪ್ರಾಪ್ತಂ | ಕೇನಪ್ರಾಪ್ತಂ |
| ,, | ೧೯ | ದುಖಃ | ದುಃಖ |
| ೧೯ | ೧೬ | ಪುರುಷೋತ್ತವ | ಪುರುಷೋತ್ತಮ |
| ೨೧ | ೫ | ತನೂಜೋವಿರಿಂಚಃ | ತನೂಜೋವಿರಿಂಚಿಃ |
| ,, | ೩೦ | ಸುತಸ್ತ್ವಯ್ಯತೋಽನ್ಯಂನ ಜಾನೇ | ಸುತಸ್ತ್ವಯ್ಯತೋ ನ್ಯನ್ನಜಾನೇ |
| ೨೨ | ೮ | ಶ್ರೀ ಕೃಷ್ಣ | ಹೇ ಕೃಷ್ಣ |
| ೨೩ | ೭ | ಉಚ್ಚರಿಸುವ | ಉಚ್ಚರಿಸುವುದು |
| ,, | ,, | ನಿಮರ್ಲ | ನಿರ್ಮಲ |
| ೨೪ | ೧೮ | ಅನಂದ | ಆನಂದ |
| ,, | ೧೯ | ಮದುಸೂದನ | ಮಧುಸೂದನ |
| ,, | ,, | ನವಸ್ಕಾರವು | ನಮಸ್ಕಾರವು |
| ೨೬ | ೧೬ | ಶ್ರುತೆಜ್ಞಾನ | ಶ್ರುತಿಜ್ಞಾನ |
| ,, | ೨೪ | ತ್ವಹಂಸಿಪಾಸಿ | ತ್ವಂಹಂಸಿಪಾಸಿ |
| ,, | ೨೫ | ತ್ಸತ್ತ್ರೋ | ತ್ವತ್ತ್ರೋ |

---

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.

# ಸೂರ್ಯಾಷ್ಟಕಂ.

ಆದಿದೇವ ನಮಸ್ತುಭ್ಯಂ ಪ್ರಸೀದ ಮಮ ಭಾಸ್ಕರ ।
ದಿವಾಕರ ನಮಸ್ತುಭ್ಯಂ ಪ್ರಭಾಕರ ನಮೋಽಸ್ತು ತೇ ॥೧॥

ಸಪ್ತಾಶ್ವರಥಮಾರೂಢಂ ಪ್ರಚಂಡಂ ಕಶ್ಯಪಾತ್ಮಜಂ ।
ಶ್ವೇತಪದ್ಮಧರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥೨॥

ಲೋಹಿತಂ ರಥಮಾರೂಢಂ ಸರ್ವಲೋಕಪಿತಾಮಹಂ ।
ಮಹಾಪಾಪಹರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥೩॥

ತ್ರೈಗುಣ್ಯಂಚ ಮಹಾ ಶೂರಂ ಬ್ರಹ್ಮವಿಷ್ಣು ಮಹೇಶ್ವರಂ ।
ಮಹಾಪಾಪಹರಂದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥೪॥

ಬೃಂಹಿತಂ ತೇಜಸಾಂ ಪುಂಜಂವಾಯುಮಾಕಾಶಮೇವಚ ।
ಪ್ರಭುಂಚಸರ್ವಲೋಕಾನಾಂ ತಂ ಸೂರ್ಯಂ ಪ್ರಣಮಾಮ್ಯಹಂ ॥೫॥

ಬಂಧೂಕಪುಷ್ಪಸಂಕಾಶಂ ಹಾರಕುಂಡಲಭೂಷಿತಂ ।
ಏಕಚಕ್ರಧರಂ ದೇವಂ ತಂ ಸೂರ್ಯಂ ಪ್ರಣಮಾಮ್ಯಹಂ ॥೬॥

ತಂ ಸೂರ್ಯಂ ಲೋಕಕರ್ತಾರಂ ಮಹಾತೇಜಃಪ್ರದೀಪನಂ ।
ಮಹಾಪಾಪಹರಂ ದೇವಂ ತಂ ಸೂರ್ಯಪ್ರಣಮಾಮ್ಯಹಂ ॥೭॥

ತಂ ಸೂರ್ಯಂ ಜಗತಾಂನಾಥಂ ಜ್ಞಾನವಿಜ್ಞಾನಮೋಕ್ಷದಂ ।
ಮಹಾಪಾಪಹರಂದೇವಂ ತಂ ಸೂರ್ಯಂಪ್ರಣಮಾಮ್ಯಹಂ ॥೮॥

ಸೂರ್ಯಾಷ್ಟಕಂ ಪಠೇನ್ನಿತ್ಯಂ ಗ್ರಹಪೀಡಾಪ್ರಣಾಶನಂ ।
ಅಪುತ್ರೋಲಭತೇ ಪುತ್ರಂ ದರಿದ್ರೋಧನವಾನ್ ಭವೇತ್ ॥೯॥

ಆಮಿಷಂ ಮಧುಪಾನಂಚ ಯಃ ಕರೋತಿರವೇರ್ದಿನೇ ।
ಸಪ್ತಜನ್ಮಭವೇದ್ರೋಗೀ ಜನ್ಮಜನ್ಮದರಿದ್ರತಾ ॥೧೦॥

ಸ್ತ್ರೀ ತೈಲಮಧುಮಾಂಸಾನಿ ಯಸ್ತ್ಯಜೇತ್ತುರವೇರ್ದಿನೇ ।
ನವ್ಯಾಧಿಶ್ಶೋಕದಾರಿದ್ರ್ಯಂ ಸೂರ್ಯಲೋಕಂಸಗಚ್ಛತಿ ॥೧೧॥

ಸೂರ್ಯಾಷ್ಟಕಂ ಸಂಪೂರ್ಣಂ.

ಶ್ರೀ ಸೀತಾರಾಘವ ಪ್ರೆಸ್, ಮೈಸೂರು.

CC-0. Bhagavad Ramanuja National Research Institute, Melukote Collection.

Funding: Tattva Heritage Foundation,Kolkata. Digitization: eGangotri.


ನಿಮಗೆ ಬೇಕಾದ ಔಷಧಿ ಸಾಮಾನುಗಳನ್ನು

# ರಘುಲಾಲ್ & ಕೋ,

ಔಷಧ ವ್ಯಾಪಾರಿಗಳು

**ಸಯ್ಯಾಜಿರಾವ್ ರಸ್ತೆ, ಮೈಸೂರು.**

ಮತ್ತು

## ರಘುಲಾಲ್ ಅಂಡ್ ಕಂಪೆನಿ,

( ಬೆಂಗಳೂರು )

**ಔಷಧ ವ್ಯಾಪಾರಿಗಳು,**

**70, ಆರ್ಕಾಟ್ ಶ್ರೀನಿವಾಸಾಚಾರ್ಯರ ರಸ್ತೆ,**

**ಬೆಂಗಳೂರು.**

**ಇವರಲ್ಲಿಯೇ ಕೊಳ್ಳಿರಿ.**


CC-0. Bhagavad Ramanuja National Research Institute, Melukote Collection.